KA / BG-GPO / 2515 / WPP-47 / 2009-2011



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೪ | ಬೆಂಗಳೂರು, ಗುರುವಾರ, ಜೂನ್ ೪, ೨೦೦೯ (ಜ್ಯೇಷ್ಠ ೧೪, ಶಕ ವರ್ಷ ೧೯೩೧) | ಸಂಚಿಕೆ ೨೩ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ:** ಕನ್ನಡ ಭವನದ ಸೇವಾ ತೆರಿಗೆ ಹಾಗೂ ಉಪಕರಗಳನ್ನು ಪಾವತಿಸಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ ಕಸಂವಾಪ್ರ 236 ಕಸನಿ 2007 ದಿನಾಂಕ 23.02.2009

2) ಸರ್ಕಾರದ ತಿದ್ದೋಲೆ ಪತ್ರ ಸಂಖ್ಯೆ ಕಸಂವಾಪ್ರ 236 ಕಸನಿ 2007 ದಿನಾಂಕ 12.06.2008

3) ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಅವರ ಪತ್ರ ಸಂಖ್ಯೆ: ಕಸನಿ:ಕಭಗುಸೇ50:2007–08 ದಿನಾಂಕ: 05.07.2008

4) ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಅವರ ಪತ್ರ ಸಂಖ್ಯೆ: ಕಸನಿ:ಕಭಗುಸೇ50:2007–08 ದಿನಾಂಕ: 15.12.2008

**ಪ್ರಸ್ತಾವನೆ:**

ಮೇಲೆ(1)ರಲ್ಲಿ ಓದಲಾದ ದಿನಾಂಕ 23.02.2009ರ ಸರ್ಕಾರದ ಆದೇಶದಲ್ಲಿ ಕನ್ನಡ ಭವನದ ಸೇವಾ ತೆರಿಗೆ ಹಾಗೂ ಉಪಕರಗಳನ್ನು ಪಾವತಿಸಲು ರೂ.4,52,478/–ಗಳ ಮೊತ್ತವನ್ನು ಲೆಕ್ಕಶೀರ್ಷಿಕೆ 4202–04–800–1–01–139 (ಯೋಜನೆ) ಯಡಿ ಮಂಜೂರು ಮಾಡಲಾಗಿದ್ದು, ಮೇಲೆ(2)ರಲ್ಲಿ ಓದಲಾದ ದಿನಾಂಕ 12.06.2008ರ ತಿದ್ದೋಲೆಯಲ್ಲಿ ಈ ಮೊತ್ತವನ್ನು ಲೆಕ್ಕಶೀರ್ಷಿಕೆ 2205–00–001–0–01–0–05ರಡಿ ಭರಿಸಲು ಅನುಮತಿ ನೀಡಲಾಗಿತ್ತು.

ಮೇಲೆ(3)ರಲ್ಲಿ ಓದಲಾದ ನಿರ್ದೇಶಕರು ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಬೆಂಗಳೂರು ಇವರ ದಿನಾಂಕ 05.07.2008ರ ಪತ್ರದಲ್ಲಿ ಮೇಲೆ(2)ರಲ್ಲಿ ಓದಲಾದ ತಿದ್ದೋಲೆಯಲ್ಲಿ ಆರ್ಥಿಕ ವರ್ಷದ ಮುಕ್ತಾಯದ ನಂತರ ತಲುಪಿದ ಕಾರಣ ಸಕಾಲದಲ್ಲಿ ಹಣವನ್ನು ಭರಿಸಲು ಸಾಧ್ಯವಾಗಿರುವುದಿಲ್ಲ. ಆದ್ದರಿಂದ ಪ್ರಸಕ್ತ ಸಾಲಿನ ಲೆಕ್ಕಶೀರ್ಷಿಕೆ 2205–00–102–4–31–059(ಯೋಜನೆ) ಇದರಡಿಯಲ್ಲಿ ಭರಿಸಲು ಸೂಕ್ತ ಆದೇಶ ಹೊರಡಿಸಬೇಕೆಂದು ಕೋರಿರುತ್ತಾರೆ.

ಮೇಲೆ(4)ರಲ್ಲಿ ಓದಲಾದ ದಿನಾಂಕ 15.12.2008ರ ಪತ್ರದಲ್ಲಿ ನಿರ್ದೇಶಕರು ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರು ಈ ಹಿಂದೆ ಸಲ್ಲಿಸಲಾಗಿದ್ದ ಪ್ರಸ್ತಾವನೆ ಲೆಕ್ಕಶೀರ್ಷಿಕೆ 2205–00–102–4–31–059(ಯೋಜನೆ)ರಡಿ ಒದಗಿಸಿರುವ ರೂ.130.00 ಲಕ್ಷಗಳನ್ನು ಪರಿಷ್ಕರಿಸಿ ರೂ.50.00 ಲಕ್ಷಗಳಿಗೆ ಸೀಮಿತಗೊಳಿಸಿರುವುದರಿಂದ ಈ ಪ್ರಸ್ತಾವನೆಗೆ ಪ್ರಸಕ್ತ ಸಾಲಿನ ಲೆಕ್ಕಶೀರ್ಷಿಕೆ 4202–04–800–1–01–139 (ಯೋಜನೆ) ಯಡಿ ಭರಿಸಲು ಅನುಮತಿ ನೀಡಬೇಕೆಂದು ಕೋರಿರುತ್ತಾರೆ.

ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸಿರುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 84 ಕಸನಿ 2008, ಬೆಂಗಳೂರು, ದಿನಾಂಕ: 12ನೇ ಮಾರ್ಚ್ 2009**

ಬೆಂಗಳೂರು ಜೆ.ಸಿ.ರಸ್ತೆಯಲ್ಲಿರುವ ಕನ್ನಡ ಭವನದ ಸೇವಾ ತೆರಿಗೆ ಹಾಗೂ ಉಪಕರಗಳನ್ನು ಪಾವತಿಸಲು ಅಗತ್ಯವಿರುವ ರೂ.4,52,478/–ಗಳನ್ನು (ರೂಪಾಯಿ ನಾಲ್ಕು ಲಕ್ಷ ಐವತ್ತೆರಡು ಸಾವಿರದ ನಾನ್ನೂರ ಎಪ್ಪತ್ತೆಂಟು ಮಾತ್ರ)ಗಳನ್ನು

ಆಯುಕ್ತರು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಬೆಂಗಳೂರು ಇವರಿಗೆ ಬಿಡುಗಡೆ ಮಾಡಲು ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರಿಗೆ ಸರ್ಕಾರದ ಅನುಮತಿ ನೀಡಲಾಗಿದೆ.

ಈ ಸಂಬಂಧ ತಗಲುವ ವೆಚ್ಚಗಳನ್ನು 2008–09ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 4202–04–800–1–01–139 (ಯೋಜನೆ) ಇದರಡಿ ಭರಿಸತಕ್ಕದ್ದು.

ಈ ಆದೇಶವನ್ನು ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಸಹಮತಿಯನ್ನು ಟಿಪ್ಪಣಿ ಸಂಖ್ಯೆ: ಇಡಿ 566 ಐಎಫ್(ಬಿಎ) 2009, ದಿನಾಂಕ 03.03.2009ರಲ್ಲಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಕೆ. ಧರ್ಮರಾಜಪ್ಪ**

ಪಿ.ಆರ್. 1023 ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

**ವಿಷಯ:** ಡಾ: ಶಿವರಾಮ ಕಾರಂತರ ಹೆಸರಿನಲ್ಲಿ ಸ್ಮಾರಕ ನಿರ್ಮಿಸಲು ಅನುದಾನ ನೀಡುವ ಬಗ್ಗೆ.

**ಓದಲಾಗಿದೆ:**
1. ಅಧ್ಯಕ್ಷರು, 1ನೇ ಕೋಟ ಕೋಟತಟ್ಟು ಗ್ರಾಮ ಪಂಚಾಯತಿ, ಉಡುಪಿ ಜಿಲ್ಲೆ, ಇವರ ಪತ್ರ ಸಂಖ್ಯೆ: 148/2008–09, ದಿ: 10–10–08
2. ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 442 ಬಿಆರ್‌ಎಸ್ 2008 ದಿನಾಂಕ: 24–11–2008
3. ಸರ್ಕಾರದ ಆದೇಶ ಸಂಖ್ಯೆ ಕಸಂವಾಪ್ರ 37 ಸ್ಮಾಪ್ರನಿ 2008 ದಿನಾಂಕ 19.12.2008

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಪತ್ರದಲ್ಲಿ ಅಧ್ಯಕ್ಷರು, 1ನೇ ಕೋಟ ಕೋಟತಟ್ಟು ಗ್ರಾಮ ಪಂಚಾಯತಿ, ಉಡುಪಿ ಜಿಲ್ಲೆ, ಇವರು ಜ್ಞಾನಪೀಠ ಪ್ರಶಸ್ತಿ ವಿಜೇತ ಕೋಟ ಶಿವರಾಮ ಕಾರಂತರು ಕೋಟತಟ್ಟು ಗ್ರಾಮದಲ್ಲಿ ಹುಟ್ಟಿದ್ದು. ಸದರಿ ಗ್ರಾಮದಲ್ಲಿ ಕಾರಂತರ ಸ್ಮಾರಕ ನಿರ್ಮಿಸಲು 1.00 ಕೋಟಿ ರೂಪಾಯಿಗಳನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ದಿನಾಂಕ: 24–11–2008 ರ ಸರ್ಕಾರದ ಆದೇಶದಲ್ಲಿ 2008–09ನೇ ಸಾಲಿನ ಲೆಕ್ಕಶೀರ್ಷಿಕೆ 2205–00–102–4–31–059 (ಯೋಜನೆ) ಅಡಿ ಈ ಸ್ಮಾರಕ ನಿರ್ಮಾಣಕ್ಕೆ ಹೆಚ್ಚುವರಿ ರೂ. 1.00 ಕೋಟಿ ಅನುದಾನವನ್ನು ಒದಗಿಸಿದ್ದು, ಈ ಮೊತ್ತವನ್ನು ಪ್ರಸಕ್ತ ಆರ್ಥಿಕ ವರ್ಷದ ಅಂತ್ಯದೊಳಗಿನ ಒಟ್ಟಾರೆ ಉಳಿತಾಯ/ ಪೂರಕ ಅಂದಾಜುಗಳ ಪುನರ್ ವಿನಿಯೋಗದಿಂದ ಭರಿಸಬಹುದೆಂದು ತಿಳಿಸಲಾಗಿದೆ.

ಮೇಲೆ(3)ರಲ್ಲಿ ಓದಲಾದ ದಿನಾಂಕ 19.12.2008ರ ಸರ್ಕಾರಿ ಆದೇಶದಲ್ಲಿ ಉಡುಪಿ ಜಿಲ್ಲೆಯ ಕೋಟತಟ್ಟು ಗ್ರಾಮದಲ್ಲಿ ಡಾ.ಶಿವರಾಮಕಾರಂತ ಸ್ಮಾರಕ ಮತ್ತು ರಂಗಮಂದಿರ ನಿರ್ಮಾಣ ಮಾಡಲು ಪ್ರಸಕ್ತ ಆರ್ಥಿಕ ವರ್ಷದ ಅಂತ್ಯದೊಳಗೆ ಒಟ್ಟಾರೆ ಉಳಿತಾಯ /ಪೂರಕ ಅಂದಾಜುಗಳ ಪುನರ್ ವಿನಿಯೋಗದಿಂದ ಭರಿಸಿ ಅನುದಾನ ಸಂಖ್ಯೆ 25ರಡಿ ಕ್ರಮಬದ್ಧಗೊಳಿಸುವ ಷರತ್ತಿಗೊಳಪಟ್ಟು ರೂ.1.00 ಕೋಟಿಗಳನ್ನು ಜಿಲ್ಲಾಧಿಕಾರಿಗಳು, ಉಡುಪಿ ಜಿಲ್ಲೆ, ಉಡುಪಿ ಇವರಿಗೆ ಬಿಡುಗಡೆ ಮಾಡಲು ನಿರ್ದೇಶಕರು ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರಿಗೆ ಸರ್ಕಾರದ ಮಂಜೂರಾತಿ ನೀಡಲಾಗಿದೆ. ಅದರಂತೆ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 37 ಸ್ಮಾಪ್ರನಿ 2008, ಬೆಂಗಳೂರು, ದಿನಾಂಕ: 23ನೇ ಮಾರ್ಚ್ 2009**

2008–09ನೇ ಸಾಲಿನ ಅನುದಾನ ಸಂಖ್ಯೆ 25ರಡಿಯಲ್ಲಿ ಪೂರಕ ಅಂದಾಜುಗಳಲ್ಲಿ ಹೆಚ್ಚುವರಿ ಅನುದಾನ ರೂ.1.00 ಕೋಟಿಗಳನ್ನು ಕ್ರಮಬದ್ದಗೊಳಿಸಿರುವುದರಿಂದ ಸಮಸಂಖ್ಯೆಯ ದಿನಾಂಕ 19.12.2008ರ ಸರ್ಕಾರಿ ಆದೇಶವನ್ನು ಈ ಮೂಲಕ ದೃಢೀಕರಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 442 ಬಿಆರ್‌ಎಸ್ 2008 ದಿನಾಂಕ 24.11.2008ರಲ್ಲಿ ನೀಡಿದ ಸಹಮತಿನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಕೆ. ಧರ್ಮರಾಜಪ್ಪ**

ಪಿ.ಆರ್. 1047 ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

**ವಿಷಯ:** ಬೆಂಗಳೂರಿನಲ್ಲಿ ಕರ್ನಾಟಕದ ಇತಿಹಾಸ, ಸಂಸ್ಕೃತಿ ಮತ್ತು ಪರಂಪರೆ ಬಿಂಬಿಸುವಂತಹ ಒಂದು ಸುಸಜ್ಜಿತವಾದ ವಸ್ತು ಸಂಗ್ರಹಾಲಯವನ್ನು ಸ್ಥಾಪಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಪತ್ರ ಸಂಖ್ಯೆ ಕಸಂವಾಪ್ರ 114 ಕೆಎಂಯು 08 ದಿನಾಂಕ 25.06.2008
2. ಆಯುಕ್ತರು, ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇವರ ಪತ್ರ ಸಂಖ್ಯೆ: ಆಪ್ರಾಸಂಪ/ಪರಂಪರಾ ವಸ್ತು ಸಂಗ್ರಹಾಲಯ/2008–09/186, ದಿನಾಂಕ 26.06.2008
3. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಕನ್ನಡ ಮತ್ತು ಸಂಸ್ಕೃತಿ ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ದಿನಾಂಕ 21.08.2008ರಂದು ನಡೆದ ಸಭೆಯ ನಡುವಳಿಗಳು
4. ನಿರ್ದೇಶಕರು ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳು ಇವರ ಪತ್ರ ಸಂಖ್ಯೆ: ಡಿಎಎಂ/ಪ.ವ.ಸ/2008–09 ದಿನಾಂಕ 15.09.2008

**ಪ್ರಸ್ತಾವನೆ:**

ಮಾನ್ಯ ಮುಖ್ಯಮಂತ್ರಿಯವರ ಪ್ರಧಾನ ಕಾರ್ಯದರ್ಶಿಗಳು ಟಿಪ್ಪಣಿ ಕಳುಹಿಸಿ ಬೆಂಗಳೂರಿನಲ್ಲಿ ಕರ್ನಾಟಕದ ಇತಿಹಾಸ, ಸಂಸ್ಕೃತಿ ಮತ್ತು ಪರಂಪರೆ ಬಿಂಬಿಸುವಂತಹ ಒಂದು ಸುಸಜ್ಜಿತವಾದ ವಸ್ತು ಸಂಗ್ರಹಾಲಯವನ್ನು ಸ್ಥಾಪಿಸುವ ಬಗ್ಗೆ ಪ್ರಸ್ತಾವನೆ ಸಲ್ಲಿಸುವಂತೆ ಸೂಚಿಸಿದ್ದರ ಹಿನ್ನೆಲೆಯಲ್ಲಿ ಮೇಲೆ ಓದಲಾದ (1)ರ ಸರ್ಕಾರಿ ಪತ್ರದಲ್ಲಿ ಇಲಾಖಾ ಮುಖ್ಯಸ್ಥರಿಂದ ಪ್ರಸ್ತಾವನೆಯನ್ನು ಕೋರಲಾಗಿದೆ. ಮೇಲೆ ಓದಲಾದ (2)ರ ಪತ್ರದಲ್ಲಿ ಆಯುಕ್ತರು, ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ, ಸುಮಾರು ರೂ.21.00 ಕೋಟಿ ವೆಚ್ಚದಲ್ಲಿ ವಸ್ತು ಸಂಗ್ರಹಾಲಯ ಸ್ಥಾಪಿಸುವ ಬಗ್ಗೆ ವಿವರವಾದ ಪ್ರಸ್ತಾವನೆಯನ್ನು ಸಲ್ಲಿಸಿರುವರು. ಅಲ್ಲದೇ ದಿನಾಂಕ 25.07.2008ರಂದು ಸರ್ಕಾರಕ್ಕೆ ಪತ್ರ ಬರೆದು ಸದರಿ ವಸ್ತು ಸಂಗ್ರಹಾಲಯದ ಸ್ಥಾಪನೆ, ಸಂಗ್ರಹಾಲಯಕ್ಕೆ ನಿವೇಶನ ಆಯ್ಕೆ, ಸಂಗ್ರಹಾಲಯದ ಸ್ಥೂಲ ರೂಪರೇಷೆಗಳ ಕುರಿತು ಚರ್ಚಿಸಲು ಒಂದು ಪೂರ್ವಾಭಾವಿ ಸಭೆ ನಡೆಸಲು ಸೂಚಿಸಿರುವ ಹಿನ್ನೆಲೆಯಲ್ಲಿ ದಿನಾಂಕ 21.08.2008ರಂದು ಸಭೆ ನಡೆಸಲಾಯಿತು. ಸದರಿ ಸಬೆಯ ನಿರ್ಧಾರದಂತೆ ಡಾ.ಆರ್.ಗೋಪಾಲ್ ನಿರ್ದೇಶಕರು ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಇವರಿಗೆ ಬಾಂಬೆ, ಕೊಲ್ಕತ್ತಾ, ದೆಹಲಿ, ಭೂಪಾಲ್, ಮತ್ತು ಇತರೆ ಸ್ಥಳಗಳಲ್ಲಿ ಇರುವ ರಾಷ್ಟ್ರೀಯ ವಸ್ತು ಸಂಗ್ರಹಾಲಯಗಳನ್ನು ಗುರುತಿಸಿ ಅದರಲ್ಲಿರುವ ವೈಜ್ಞಾನಿಕ ಮತ್ತು ಐತಿಹಾಸಿಕವಾದಂತಹ ಸ್ಮಾರಕ, ಧ್ವನಿ ಮತ್ತು ಶ್ರವಣ ವ್ಯವಸ್ಥೆ ಇರುವ ವಸ್ತು ಸಂಗ್ರಹಾಲಯಗಳ ಅಧ್ಯಯನ ನಡೆಸಿ 15 ದಿನಗಳೊಳಗಾಗಿ ವರದಿ ಸಲ್ಲಿಸುವಂತೆ ತಿಳಿಸಲಾಯಿತು. ಅದರಂತೆ ನಿರ್ದೇಶಕರು ಅವರ ಇಲಾಖೆಯ ಇತರೆ ಅಧಿಕಾರಿಗಳೊಂದಿಗೆ ಪ್ರವಾಸ ಕೈಗೊಂಡು ವಿಸ್ತೃತವಾದ ವರದಿಯನ್ನು ನೀಡಿರುವರು. ತದನಂತರ ಸದರಿ ವಸ್ತು ಸಂಗ್ರಹಾಲಯಕ್ಕೆ ಬೇಕಾಗಿರುವ ನಿವೇಶನವನ್ನು ಪಡೆಯಲು ಪ್ರಯತ್ನಿಸಲಾಗುತ್ತಿದೆ. ಆರ್ಥಿಕ ಇಲಾಖೆಯು ಲೆಕ್ಕಶೀರ್ಷಿಕೆ 2205–00–103–0–25–059 (ಯೋಜನೆ) ಅಡಿಯಲ್ಲಿ ರೂ.300.00 ಲಕ್ಷಗಳನ್ನು ಈ ಕಾರ್ಯಕ್ರಮಕ್ಕಾಗಿ ಮಂಜೂರು ಮಾಡಿದೆ. ಸದರಿ ಸಂದರ್ಭದಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಕಸಂವಾಪ್ರ 114 ಕೆಎಂಯು 2008, ಬೆಂಗಳೂರು, ದಿನಾಂಕ: 20ನೇ ಮಾರ್ಚ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಇಲಾಖೆ, ಮೈಸೂರು ಇವರ ಸಹಯೋಗದೊಂದಿಗೆ ಬೆಂಗಳೂರಿನಲ್ಲಿ ಕರ್ನಾಟಕದ ಇತಿಹಾಸ, ಸಂಸ್ಕೃತಿ ಮತ್ತು ಪರಂಪರೆ ಬಿಂಬಿಸುವಂತಹ ಒಂದು ಸುಸಜ್ಜಿತವಾದ ವಸ್ತು ಸಂಗ್ರಹಾಲಯವನ್ನು ಸ್ಥಾಪಿಸಲು ಸರ್ಕಾರವು ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು ರವರಿಗೆ ಮಂಜೂರಾತಿ ನೀಡಿದೆ. ಈ ಬಗ್ಗೆ ಪೂರ್ಣ ರೂಪರೇಷೆಗಳನ್ನೊಳಗೊಂಡ ನಿಯಮಾವಳಿಗಳನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಕೆ. ಧರ್ಮರಾಜಪ್ಪ**
ಪಿ.ಆರ್. 1048 ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ:** ಗುಲ್ಬರ್ಗಾ ಜಿಲ್ಲೆ, ಚಿಂಚೋಳಿ ತಾಲ್ಲೂಕು ಸಾಲೇಬೀರನಹಳ್ಳಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಸಾಲೇಬೀರನಹಳ್ಳಿ ಗ್ರಾಮದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ: 21.01.09ರ ಪತ್ರ ಸಂಖ್ಯೆ:ಮುಇಂ/ಸನೀ(ಉ)ಬಿಜಾ/ಭೂಸ್ವಾಪ್ರ/2008–09/403.

**ಪ್ರಸ್ತಾವನೆ:**

ಮೇಲೆ ಓದಲಾದ ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್ ಪತ್ರದಲ್ಲಿ ಗುಲ್ಬರ್ಗಾ ಜಿಲ್ಲೆ, ಚಿಂಚೋಳಿ ತಾಲ್ಲೂಕು ಸಾಲೇಬೀರನಹಳ್ಳಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಸಾಲೇಬೀರನಹಳ್ಳಿ ಗ್ರಾಮದ ಜಮೀನುಗಳಿಗೆ ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು

ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ: 19/11/1992.
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹರ ಧನದ ಐತೀರ್ಪು ಘೋಷಿಸಿದ ದಿನಾಂಕ: 22/03/1996.

ಮೇಲ್ಕಂಡ ಸಾಲೇಬೀರನಹಳ್ಳಿ ಗ್ರಾಮದ ಸರ್ವೆ ನಂಬರ್‌ಗಳಿಗೆ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ದಾಖಲಿಸಿದ್ದ ಎಲ್.ಎ.ಸಿ. ಪ್ರಕರಣಗಳಲ್ಲಿ ಮಾನ್ಯ ಗುಲ್ಬರ್ಗಾದ ಸಿವಿಲ್ ನ್ಯಾಯಾಲಯವು (ಹಿರಿಯ ಶ್ರೇಣಿ) ಹೆಚ್ಚಿನ ಪರಿಹರ ಧನಕ್ಕೆ ತೀರ್ಪು ನೀಡಿದೆ. ಈ ತೀರ್ಪುಗಳ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಾನೂನು ಇಲಾಖೆಯು ಪತ್ರ ಸಂಖ್ಯೆ:ಲಾ 215 ಎಲ್‌ಎಸ್‌ಜಿ 2000, ದಿನಾಂಕ: 07/04/2000ರಲ್ಲಿ ಅಭಿಪ್ರಾಯ ನೀಡಿತ್ತು. ಆದಾಗ್ಯೂ ಭೂಮಾಲೀಕರು ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ಎಂ.ಎಸ್.ಎ. ಸಂಖ್ಯೆ:96/07 ರಿಂದ 100/07 ದಾಖಲಿಸಿದ್ದು, ಉಚ್ಚ ನ್ಯಾಯಾಲಯವು ಜಿಲ್ಲಾ ನ್ಯಾಯಾಲಯದ ತೀರ್ಪನ್ನು ಎತ್ತಿ ಹಿಡಿದು ಪರಿಹಾರ ಧನವನ್ನು ರೂ.36,790/–ಗಳಿಗೆ ಹೆಚ್ಚಿಸಿ ಪಾವತಿಸುವಂತೆ ತೀರ್ಪು ನೀಡಿದೆ. ಸದರಿ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸುವ ಅವಶ್ಯಕತೆಯಿಲ್ಲವೆಂದು ಕಂದಾಯ ಇಲಾಖೆಯ ಕಾನೂನು ಕೋಶವು ದಿನಾಂಕ: 12/03/09ರಂದು ಅಭಿಪ್ರಾಯ ನೀಡಿದೆ.

ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿರುವ ಪ್ರಕರಣಗಳ ವಿವರ ಕೆಳಕಂಡಂತಿದೆ:

| ಕ್ರ. ಸಂ. | ಎಲ್‌ಎಸಿ ಸಂಖ್ಯೆ | ಎಂಎಸ್‌ಎ ಸಂಖ್ಯೆ | ಸಾಲೇಬೀರನಹಳ್ಳಿ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ. | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|---|
| 1 | 711/97 | 98/07 | 18/2 | 0–10 | 12282 |
| 2 | 712/97 | 96/07 | 32/1 | 0–20 | 24564 |
| 3 | 713/97 | 100/07 | 32/2 | 1–00 | 49129 |
| 4 | 714/97 | 97/07 | 152/2 | 0–24 | 385660 |
| | | | 18/1 | 7–10 | |
| 5 | 715/97 | 99/07 | 152/1 | 0–04 | 31934 |
| | | **ಒಟ್ಟು** | | | **503569** |

- ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸನೀಇ 15 ಭೂಸ್ವಾಪ್ರ 2009, ಬೆಂಗಳೂರು, ದಿನಾಂಕ: 25ನೇ ಏಪ್ರಿಲ್ 2009**

ಗುಲ್ಬರ್ಗಾ ಜಿಲ್ಲೆ, ಚಿಂಚೋಳಿ ತಾಲ್ಲೂಕು ಸಾಲೇಬೀರನಹಳ್ಳಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಸಾಲೇಬೀರನಹಳ್ಳಿ ಗ್ರಾಮಕ್ಕೆ ಸೇರಿದ ಮೇಲ್ಕಂಡ ಸರ್ವೆ ನಂಬರ್‌ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಾಹಾಕಿದ ಪರಿಹಾರ ಧನ ಮೊತ್ತ ರೂ.5,03,569–00ಗಳನ್ನು (ಐದು ಲಕ್ಷದ ಮೂರು ಸಾವಿರದ ಐನೂರ ಅರವತ್ತೊಂಭತ್ತು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ: 16/05/2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರ ದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1171

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

**ವಿಷಯ:** 2009–10ನೇ ಸಾಲಿಗೆರ ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಯ ಮುಂದುವರೆದ ಯೋಜನೆಗಳಿಗೆ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ:** ದಿನಾಂಕ: 10.04.2008ರ ಆದೇಶ ಸಂಖ್ಯೆ:ಮೂಅಇ 19 ಮೂಇವಿ 2008.

ಪ್ರಸ್ತಾವನೆ:

ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಯ ರಚನೆಯ ಉದ್ದೇಶವು ಸಚಿವಾಲಯದ ಮಟ್ಟದಲ್ಲಿ ರೂ.100 ಕೋಟಿಗಳಿಗೂ ಮೀರಿದ ಮೆಗಾ ಯೋಜನೆಗಳ ರೂಪಿಸುವಿಕೆ ಹಾಗೂ ಸಮನ್ವಿಕರಣ ಮಾಡುವುದಾಗಿರುತ್ತದೆ. ಈ ಇಲಾಖೆಯಲ್ಲಿ ಪ್ರಧಾನವಾಗಿ ಕಾರ್ಯಗತಗೊಳಿಸುತ್ತಿರುವ ಯೋಜನೆಗಳಾದ ವಿಮಾನ ನಿಲ್ದಾಣ ಯೋಜನೆ, ಸಣ್ಣ ವಿಮಾಣ ನಿಲ್ದಾಣಗಳ/ಇಳಿದಾಣಗಳ ಅಭಿವೃದ್ಧಿ, ವೆಚ್ಚ ಹಂಚಿಕೆ ಹೊಸ ರೈಲ್ವೆ ಯೋಜನೆಗಳು, ರಸ್ತೆ ಮೇಲು ಸೇತುವೆ/ಕೆಳಸೇತುವೆ ಯೋಜನೆಗಳು ಮುಂತಾದವುಗಳಿಗೆ 2009–10ನೇ ಸಾಲಿನ ಆಯವ್ಯಯದಲ್ಲಿ ಒದಗಣೆ ಮಾಡಲಾಗಿದೆ.

2. ವಿಮಾನ ಯಾನದಲ್ಲಿ ಇಂಧನ ತೆರಿಗೆ ಮರು ಪಾವತಿಗೆ ಸಂಬಂಧಿಸಿದಂತೆ ಈ ಸಾಲಿನಲ್ಲಿ ಹೊಸ ಯೋಜನೆ ರೂಪಿಸಿ ರೂ.36.00 ಲಕ್ಷಗಳ ಆಯವ್ಯಯ ಅವಕಾಶ ಕಲ್ಪಿಸಲಾಗಿದೆ. ಇದನ್ನೂ ಸಹ ಮುಂದುವರೆದ ಯೋಜನೆಯೆಂದು ಪರಿಗಣಿಸಲು ತೀರ್ಮಾನಿಸಿದೆ.

3. 2008–09ನೇ ಸಾಲಿಗೆ ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಯ 21 ಯೋಜನೆಗಳನ್ನು ಮುಂದುವರೆದ ಯೋಜನೆಗಳೆಂದು ಪರಿಗಣಿಸಿ ಮೇಲೆ ಓದಲಾದ ಸರ್ಕಾರಿ ಆದೇಶದಲ್ಲಿ ಮಂಜೂರಾತಿ ನೀಡಲಾಗಿತ್ತು. 2009–10ನೇ ಸಾಲಿನಲ್ಲಿ ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಯ ಈ ಕೆಳ ಕಾಣಿಸಿದ 22 ಯೋಜನೆಗಳನ್ನು ಮುಂದುವರಿದ ಯೋಜನೆಗಳೆಂದು ಪರಿಗಣಿಸಲು ಅನುಮೋದನೆ ನೀಡಿದೆ. ಅಂತೆಯೇ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಮೂಅಇ 32 ಮೂಇವಿ 2009, ಬೆಂಗಳೂರು, ದಿನಾಂಕ: 15ನೇ ಏಪ್ರಿಲ್ 2009**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಲ್ಲಿ 2009–10ನೇ ಹಣಕಾಸಿನ ವರ್ಷದಲ್ಲಿ ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಯ ಈ ಕೆಳಕಂಡ 22 ಯೋಜನೆಗಳನ್ನು ಮುಂದುವರೆದ ಯೋಜನೆಗಳೆಂದು ಪರಿಗಣಿಸಿ ಇವುಗಳ ಅನುಷ್ಠಾನಕ್ಕೆ ಈ ಮೂಲಕ ಸರ್ಕಾರದ ಮಂಜೂರಾತಿಯನ್ನು ನೀಡಿದೆ.

| Sl. No. | Nomenclature of the Scheme | Ilcad of Account | 2008-09 Budget Provision | 2009-10 Budget Provision (Rs. in Lakhs) |
|---|---|---|---|---|
| 1 | IDeCK-Investments | 5465-01-190-1-01-211 | 50.00 | 200.00 |
| 2 | BIAP-Assistance for repayment of HUDCO loans Debts Servicing. | 5465-01-190-1-04-240 | 1771.00 | 2599.00 |
| 3 | Development of Minor Airports Investments. | 5465-01-190-1-05-211 | 15000.00 | 10000.00 |
| 4 | Hubli Ankola Railway project | 5465-10-1901-11 | 500.00 | 1.00 |
| 5 | Investment in BIAL through KSIIDC | 5465-01-190-2-01 | 3798.00 | 1500.00 |
| 6 | BIAL State Support to Project Financial Assistance Relief | 5465-01-190-2-02 | 5500.00 | - |
| 7 | KSIIDC-BIAP cell-Investments | 5465-01-190-2-03-211 | 25.00 | 25.00 |
| 8 | KPTCL-Providing power at the airport near BIAP site. | 5465-01-190-2-04-211 | 1.00 | 1.00 |
| 9 | Alternate Roads Investments | 5465-01-190-2-05-211 | 10.00 | 2000.00 |
| 10 | Land acquisition for Trumpet Interchange investments | 5465-01-190-2-06-211 | 200.00 | 200.00 |
| 11 | Development of 408 acres of Govt. land adjacent to BIAP General Expenses. | 5465-01-190-2-07-051 | 100.00 | 100.00 |
| 12 | Aviation Turbine Fuel-Tax Reimbursement Investment | 5465-01-190-2-11 | - | 36.00 |
| 13 | Hassan-mangalore guage conversion project-Investments | 5465-01-190-3-02 | 1.00 | 900.00 |
| 14 | Sholapur-Gadag guage conversion project-Investments | 5465-01-190-3-03 | 100.00 | 2800.00 |

| Sl. No. | Nomenclature of the Scheme | IIcad of Account | 2008-09 Budget Provision | 2009-10 Budget Provision (Rs. in Lakhs) |
|---|---|---|---|---|
| 15 | K-RIDE – RoB/ RuB project investment fund. | 5465-01-190-3-04-211 | 3000.00 | 3000.00 |
| 16 | New Cost Sharing project-Investments | 5465-01-190-3-05-211 | 10000.00 | 10000.00 |
| 17 | Rail link to New Airport | 5465-01-190-3-06-211 | 500.00 | 570.00 |
| 18 | Commuter Rail Service for Bangalore. | 5465-01-190-3-07-211 | 100.00 | 100.00 |
| 19 | Cost sharing Ramanagaram-Mysore Railway Doubling-Other expenditure | 5465-01-190-3-08 | 3000.00 | 2500.00 |
| 20 | Land for railway cargo complex at Hubli-other expenses. | 5465-01-1-190-3-09 | 1.00 | 1.00 |
| 21 | Cost sharing-Bidar-Gulbarga New Railway line | 5465-01-190-3-10 | 4200.00 | 5000.00 |
| 22 | Infrastructure Proliminary Studies Other Expenditure | 3451-00-090-06-059 | 100.00 | 881.00 |
| 23 | Infrastructure Preliminary Studies – Modernisation | 3451-00-090-1-06-125 | 150.00 | 100.00 |
| | | **Total** | **48107.00** | **42514.00** |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1172

**ಎನ್. ಮಂಜುಳಗೀತ**

ಸರ್ಕಾರದ ಅಧೀನ ಕಾರ್ಯದರ್ಶಿ, ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ.

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಕೆ. ಯೋಗೇಶ್ವರಪ್ಪ ಪಿ.ಸಿ–1366, ಪೇಪರ್‌ಟೌನ್ ಪೊಲೀಸ್ ಠಾಣೆ, ಶಿವಮೊಗ್ಗ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಶಿವಮೊಗ್ಗ ಜಿಲ್ಲೆ, ಇವರ ಆದೇಶ ಸಂಖ್ಯೆ: ಸಿಬ್ಬಂದಿ(4)ಶಿಕ್ಷೆ:27:06 ಓ.ಬಿ:246/2000 ದಿ:15.08.2008.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ, ಇವರ ಆದೇಶ ಸಂಖ್ಯೆ:33/ಅಪೀಲು/ಸಿಬ್ಬಂದಿ 2/2006–07 ಓ.ಬಿ:09/2007–08 ದಿ:23.07.07.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:04.11.08.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)96/2008–09 ದಿನಾಂಕ:06.02.09.

**ಪ್ರಸ್ತಾವನೆ:**

ಶ್ರೀ ಕೆ. ಯೋಗೇಶ್ವರಪ್ಪ ಪಿ.ಸಿ–1366, ಪೇಪರ್‌ಟೌನ್ ಪೊಲೀಸ್ ಠಾಣೆ, ಭದ್ರಾವತಿ, ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಹೊಸನಗರ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಕರ್ತವ್ಯದಲ್ಲಿ ತೀವ್ರ ಲೋಪ ಮತ್ತು ದುರ್ನಡತೆ ಪ್ರದರ್ಶಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 7ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷರೋಪಣೆ:**

ನೀವುಗಳು ದಿ:31.10.05 ರಂದು ಸಂಜೆ 6.00 ಗಂಟೆ ಸಮಯದಲ್ಲಿ ಶ್ರೀ ಕೆ.ಎಂ. ಮಹೇಶ್, ಬಿನ್ ಮಂಜಪ್ಪಗೌಡ, ಇವರ ಮಳಿಗೆಗೆ ನುಗ್ಗಿ ಅವರಿಗೆ ಪೆಟ್ರೋಲ್ ಡೀಸೆಲ್‌ನ್ನು ಕಳ್ಳತನದಲ್ಲಿ ಮಾರುತ್ತೀಯ ಎಂದು ಹೇಳಿ 40ಲೀ. ಡೀಸೆಲ್ ಹಾಗೂ 10ಲೀ. ಪೆಟ್ರೋಲ್ ತೆಗೆದುಕೊಂಡು ಮಹೇಶ್‌ರವರನ್ನೂ ಸಹ ಠಾಣೆಗೆ ಕರೆದುಕೊಂಡು ಹೋಗಿ ಅವರನ್ನು

ಬಿಡಲು ರೂ.13,000–00 ಅಕ್ರಮ ಸಂಭಾವನೆ ಪಡೆದು ಶಿಸ್ತಿನ ಇಲಾಖೆಯ ಗೌರವಕ್ಕೆ ಧಕ್ಕೆ ತರುವಂತೆ ವರ್ತಿಸಿ ಕರ್ತವ್ಯದಲ್ಲಿ ತೀವ್ರ ಲೋಪ ಮತ್ತು ದುರ್ನಡತೆ ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಶಿವಮೊಗ್ಗ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:05.08.2006ರ ಆದೇಶದಲ್ಲಿ "ಇವರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಭವಿಷ್ಯದ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಮುಂದೂಡಿ ದಿ:22.11.05 ರಿಂದ 10.03.06ರ ವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿ ಆದೇಶಿಸಿದ್ದಾರೆ."

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವವಲಯ, ದಾವಣಗೆರೆ, ಇವರು ಮೇಲ್ಮನವಿಯನ್ನು ಅನುಕಂಪದ ಮೇರೆಗೆ ಪರಿಗಣಿಸಿ ಶಿಸ್ತುಪ್ರಾಧಿಕಾರದ ದಂಡನಾದೇಶವನ್ನು ಭಾಗಶಃ ಮಾರ್ಪಡಿಸಿ ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ: 23.07.07ರ ಆದೇಶದಲ್ಲಿ ಇವರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಮೂರು ತಿಂಗಳ ಕಾಲ ಮುಂದೂಡಿ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿದ್ದಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ

**ಸರ್ಕಾರದ ಆದೇಶ ಸಂಖ್ಯೆ:ಒಇ 56 ಪೊಸಿಅ 2009, ಬೆಂಗಳೂರು, ದಿನಾಂಕ: 26ನೇ ಮಾರ್ಚ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಕೆ. ಯೋಗೇಶ್ವರಪ್ಪ ಪಿ.ಸಿ–1366, ಪೇಪರ್‌ಟೌನ್ ಪೊಲೀಸ್ ಠಾಣೆ, ಭದ್ರಾವತಿ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1173 **ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

**ವಿಷಯ:** ಶ್ರೀ ಎಚ್.ಎಂ. ರಾಜಪ್ಪ, ಪಿ.ಸಿ.–1147, ದೊಡ್ಡಪೇಟೆ ಪೊಲೀಸ್ ಠಾಣೆ, ಶಿವಮೊಗ್ಗ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಶಿವಮೊಗ್ಗ ಜಿಲ್ಲೆ, ಇವರ ಆದೇಶ ಸಂಖ್ಯೆ: ಸಿಬ್ಬಂದಿ(4)ಶಿಕ್ಷೆ/131/07 ಓ.ಬಿ:495/07 ದಿ:30.12.07.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ, ಇವರ ಆದೇಶ ಸಂಖ್ಯೆ:45/ಅಪೀಲು/ಸಿಬ್ಬಂದಿ/–2/2007–08 ಓ.ಬಿ:21/2008–09 ದಿ:30.04.08.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:18.08.2008.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)59/2008–09 ದಿನಾಂಕ:30.12.08.

**ಪ್ರಸ್ತಾವನೆ:**

ಶ್ರೀ ಎಚ್.ಎಂ. ರಾಜಪ್ಪ, ಪಿ.ಸಿ.–1147, ದೊಡ್ಡಪೇಟೆ ಪೊಲೀಸ್ ಠಾಣೆ, ಶಿವಮೊಗ್ಗ ಜಿಲ್ಲೆ, ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರು ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿ ಪ್ರದರ್ಶಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 7ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷರೋಪಣೆ:**

"ನೀವು ದೊಡ್ಡಪೇಟೆ ಠಾಣಾ ವ್ಯಾಪ್ತಿಯ 21ನೇ ವಾರ್ಡ್ ಕರ್ತವ್ಯಕ್ಕೆ ನೇಮಕವಾಗಿದ್ದು, ನಿಮ್ಮ ವಾರ್ಡ್‌ನಲ್ಲಿಯೇ ದಿ:31.08.07 ರಂದು ಗಾಂಧಿಬಜಾರ್‌ನ ಸಿದ್ದಪ್ಪ ಕಾಂಪ್ಲೆಕ್ಸ್‌ನಲ್ಲಿ ತರುಣ ಅಲಿಯಾಸ್ ಗಾಂಪ ಬಿನ್ ಬಲದೇವು, ಸುನೀಲ ಬಿನ್ ವಾಸುದೇವ ಎಂಬುವವರು ಕಾನೂನು ಬಾಹಿರವಾಗಿ ಓ.ಸಿ. ಮಟ್ಕಾ, ಜೂಜಾಟ ನಡೆಸುತ್ತಿದ್ದರೂ ಸಹ ನೀವು ಈ ಬಗ್ಗೆ ಮಾಹಿತಿ ಸಂಗ್ರಹಿಸದೆ, ಓ.ಸಿ. ಮಟ್ಕಾ ನಿಯಂತ್ರಿಸುವಲ್ಲಿ ವಿಫಲರಾಗಿರುವುದಲ್ಲದೆ ದೊಡ್ಡಪೇಟೆ

ಠಾಣೆಯಲ್ಲಿ ಗುನ್ನೆ ನಂ:175:07 ಕಲಂ 78 (3) ಕೆ.ಪಿ.ಆಕ್ಟ್ ರೀತ್ಯಾ ಪ್ರಕರಣ ದಾಖಲಾಗಲು ಕಾರಣರಾಗಿ ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತೆ ಮತ್ತು ಬೇಜವಾಬ್ದಾರಿ ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಶಿವಮೊಗ್ಗ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:30.12.2007ರ ಆದೇಶದಲ್ಲಿ "ಇವರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಭವಿಷ್ಯದ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ 06 ತಿಂಗಳ ಕಾಲ ಮುಂದೂಡುವ ದಂಡನೆ ವಿಧಿಸಿದ್ದಾರೆ."

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವವಲಯ, ದಾವಣಗೆರೆ, ಇವರು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ: 30.04.2008ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಓ.ಸಿ. ಮಟ್ಕಾದಂತಹ ಕಾನೂನು ಬಾಹಿರ ಚಟುವಟಿಕೆಗಳು ಅವ್ಯಕ್ತವಾಗಿ ನಡೆಯುತ್ತಿದ್ದರಿಂದ ವಿಶೇಷ ಘಟಕದವರು ದಾಳಿ ನಡೆಸಿದ್ದಾರೆ. ಕಾನೂನು ಬಾಹಿರ ಚಟುವಟಿಕೆ ನಡೆಯುತ್ತಿರುವ ಬಗೆಗಿನ ಮಾಹಿತಿಯನ್ನು ಮೇಲಾಧಿಕಾರಿಗಳ ಗಮನಕ್ಕೆ ತರದೇ ಕರ್ತವ್ಯಲೋಪವೆಸಗಿರುವುದು ಕಂಡುಬರುತ್ತದೆ. ಅರ್ಜಿದಾರರು ಶಿಸ್ತಿನ ಇಲಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 262 ಪೊಸಿಅ 2008, ಬೆಂಗಳೂರು, ದಿನಾಂಕ: 26ನೇ ಮಾರ್ಚ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಚ್.ಎಂ. ರಾಜಪ್ಪ, ಪಿ.ಸಿ.–1147, ದೊಡ್ಡಪೇಟೆ ಪೊಲೀಸ್ ಠಾಣೆ, ಶಿವಮೊಗ್ಗ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1174

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಆಡಳಿತ ಸುಧಾರಣೆ ಮತ್ತು ರಾಜಕೀಯ ವಿಶ್ರಾಂತಿ ವೇತನ) ಯಲ್ಲಿನ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 12 ಸಸಿವಿ 2007, ದಿನಾಂಕ: 06.05.2008.
2. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಆಡಳಿತ ಸುಧಾರಣೆ ಇವರ ಅನಧಿಕೃತ ಟಿಪ್ಪಣಿ ಸಂಖ್ಯೆ : ಸಿಆಸುಇ/06/ಆಸು/2009, ದಿನಾಂಕ: 19.01.2009.

**ಪ್ರಸ್ತಾವನೆ:**

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಆಡಳಿತ ಸುಧಾರಣೆ, ತರಬೇತಿ ಮತ್ತು ರಾಜಕೀಯ ವಿಶ್ರಾಂತಿ ವೇತನ) ಯಲ್ಲಿ ಸೃಜಿಸಲಾಗಿರುವ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯೊಂದಿಗೆ ಈ ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳನ್ನು ತಾತ್ಕಾಲಿಕವಾಗಿ ವರ್ಷದಿಂದ ವರ್ಷಕ್ಕೆ ಮುಂದುವರೆಸುತ್ತಾ ಬಂದಿದ್ದು, ಈ ಹುದ್ದೆಗಳನ್ನು ಮೇಲೆ (1) ರಲ್ಲಿ ಓದಲಾದ ದಿನಾಂಕ: 06.05.2008 ರ ಸರ್ಕಾರದ ಆದೇಶದಲ್ಲಿ ದಿನಾಂಕ: 01.04.2008 ರಿಂದ 31.03.2009 ರವರೆಗೆ ಮುಂದುವರಿಸಲಾಗಿತ್ತು.

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1. | ಆಪ್ತ ಕಾರ್ಯದರ್ಶಿ (ಆಪ್ತ ಕಾರ್ಯದರ್ಶಿ ಗ್ರೇಡ್–2)/ಪತ್ರಾಂಕಿತ ಆಪ್ತ ಸಹಾಯಕ | 1 ಹುದ್ದೆ |
| 2. | ಶೀಘ್ರಲಿಪಿಗಾರರು/ಹಿರಿಯ ಶೀಘ್ರಲಿಪಿಗಾರರು/ಪತ್ರಾಂಕಿತ ಆಪ್ತ ಸಹಾಯಕರು | 2 ಹುದ್ದೆಗಳು |
| 3. | ಭಾಷಾಂತರಕಾರರು (ಶಾಖಾಧಿಕಾರಿ/ಹಿರಿಯ ಸಹಾಯಕ) | 1 ಹುದ್ದೆ |
| 4. | ಸಹಾಯಕರು (ಹಿರಿಯ ಸಹಾಯಕ/ಸಹಾಯಕ) | 1 ಹುದ್ದೆ |
| 5. | ವಾಹನ ಚಾಲಕರು | 1 ಹುದ್ದೆ |
| 6. | ದಲಾಯತ್ | 2 ಹುದ್ದೆಗಳು |
| | **ಒಟ್ಟು** | **8 ಹುದ್ದೆಗಳು** |

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿ (ಆಡಳಿತ ಸುಧಾರಣೆ) ಹಾಗೂ ಪೂರಕ ಹುದ್ದೆಗಳನ್ನು ದಿನಾಂಕ: 01.04.2009 ರಿಂದ 31.03.2010 ರವರೆಗೆ ಮುಂದುವರಿಸುವಂತೆ ಕೋರಲಾಗಿದೆ. ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 206 ಸಅಸೇ 2009, ಬೆಂಗಳೂರು, ದಿನಾಂಕ: 20ನೇ ಏಪ್ರಿಲ್ 2009**

ಕರ್ನಾಟಕ ಸರ್ಕಾರದ ಸಚಿವಾಲಯದ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಆಡಳಿತ ಸುಧಾರಣೆ, ತರಬೇತಿ ಮತ್ತು ರಾಜಕೀಯ ವಿಶ್ರಾಂತಿ ವೇತನ)ಯಲ್ಲಿ ತಾತ್ಕಾಲಿಕವಾಗಿ ಸೃಜಿಸಲಾಗಿರುವ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯೊಂದಿಗೆ ಈ ಕೆಳಕಂಡ ಪೂರಕ ಹುದ್ದೆಗಳನ್ನು ದಿನಾಂಕ:01.04.2009 ರಿದ 31.03.2010 ರವರೆಗೆ ತಾತ್ಕಾಲಿಕವಾಗಿ ಮುಂದುವರೆಸಿ ಆದೇಶಿಸಿದೆ.

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1. | ಆಪ್ತ ಕಾರ್ಯದರ್ಶಿ (ಆಪ್ತ ಕಾರ್ಯದರ್ಶಿ ಗ್ರೇಡ್–2)/ಪತ್ರಾಂಕಿತ ಆಪ್ತ ಸಹಾಯಕ | 1 ಹುದ್ದೆ |
| 2. | ಶೀಘ್ರಲಿಪಿಗಾರರು/ಹಿರಿಯ ಶೀಘ್ರಲಿಪಿಗಾರರು/ಪತ್ರಾಂಕಿತ ಆಪ್ತ ಸಹಾಯಕರು | 2 ಹುದ್ದೆಗಳು |
| 3. | ಭಾಷಾಂತರಕಾರರು (ಶಾಖಾಧಿಕಾರಿ/ಹಿರಿಯ ಸಹಾಯಕ) | 1 ಹುದ್ದೆ |
| 4. | ಸಹಾಯಕರು (ಹಿರಿಯ ಸಹಾಯಕ/ಸಹಾಯಕ) | 1 ಹುದ್ದೆ |
| 5. | ವಾಹನ ಚಾಲಕರು | 1 ಹುದ್ದೆ |
| 6. | ದಲಾಯತ್ | 2 ಹುದ್ದೆಗಳು |
| | **ಒಟ್ಟು** | **8 ಹುದ್ದೆಗಳು** |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್.ಡಿ 1 ಟಿಎಫ್‌ಪಿ 96, ದಿನಾಂಕ: 10.07.1996 ರಲ್ಲಿ ಪ್ರತ್ಯೋಜಿಸಿರುವ ಅಧಿಕಾರದ ಅನ್ವಯ ಆರ್ಥಿಕ ಇಲಾಖೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಪಿ.ಆರ್. 1175

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–3).

## ನಗರಾಭಿವೃದ್ಧಿ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ:ನಅಇ 724 ಮೈಅಪ್ರಾ 2008, ಬೆಂಗಳೂರು, ದಿನಾಂಕ: 15ನೇ ಏಪ್ರಿಲ್ 2009**

ಸರ್ಕಾರಿ ಅಧಿಸೂಚನೆ ಸಂಖ್ಯೆ ನಅಇ 724 ಮೈಅಪ್ರಾ 2008 ದಿನಾಂಕ:3.01.2009ರ ಅನುಬಂಧ 1ರಲ್ಲಿನ ಕ್ರಮ ಸಂಖ್ಯೆ 8 ರ ಕಲಂನಲ್ಲಿ "ಪುತ್ತಿ" ಎಂದಿರುವುದನ್ನು "ಪುತ್ತಿಗೆ" ಎಂದು ಹಾಗೂ ಸರ್ವೆ ನಂ.211 ಎಂದಿರುವುದನ್ನು ಸರ್ವೆ ನಂ.221 ಎಂದು ಮತ್ತು ಸರ್ವೆ ನಂ.557 ಎಂದಿರುವುದನ್ನು ಸರ್ವೆ ನಂ.577 ಎಂದು ತಿದ್ದಿ ಓದಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1176

**ಸಿ.ಟಿ. ನಾರಾಯಣಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

## FOREST, ECOLOGY AND ENVIRONMENT SECRETARIAT

**Sub:** Diversion of 2.00 ha. of forest land in Sy.No. 108A1A1A1A1A1 of Manaki village for the purpose of solid waste Management of Kumta Town in favour of Chief Officer, Town Municipal Council, Kumta.

**Read:**
1. Government Order No. FEE 3 FGL 2006, dated: 27.11.2007.
2. Principal Chief Conservator of Forests, Bangalore. Letter No.A5(2)GFL-CR-7/05-06, dated: 25.11.2008.

**Preamble:**

In Government order read at (1) above approval as accorded for diversion of 2.00 ha. of forest land in Sy.No. 108A of Manaki village for the purpose of solid waste Management of Kumta Town in favour of Chief Officer, Town Municipal Council, Kumta.

The Principal Chief Conservator of Forests vide his letter read at (2) above had stated as per the conditions laid down both Government of India and Government of Karnataka and Deputy Conservator of Forests, Honnavar wa directed to hand over the forest land to the Chief Officer, Town Municipal Cpuncil,

Kumta. Maruru Gudda Hitharakshana Samithi, Kumta filed an objection petition against establishment of the above solid waste management unit before the HRC stating that the unit pollute the underground water in vicinity and would seriously affect the health of residents in the area. In this regard a meeting was held under the Chairmanship of the Deputy Commissioner, Uttara Kannada, Karwar and decided to find an alternate site for establishing the unit. As suggested by the Conservator of Forests, Kanara Circle an alternate site in the some area in Manaki village Sy.No. 108 A1A1A1A1A1 has been identified by the Town Municipal Council, Kumta and the area does not have any tree growth and is not suitable for taking up any forestry work and it is completely surrounded by laterite stone and very much suitable for establishing solid waste disposal unit by Town Municipal Council, Kumta.

Proposal has been examined in detail and hence the order.

**Government Order No. FEE 03 FGL 2009, Bangalore, Dated: 6th April 2009**

In the circumstances explained above, in partial modification read at (1) above Government is pleased to accord approval for diversion of 2.00 ha. of forest land in Sy.No.108 A1A1A1A1A1 of Manaki village for the purpose of solid waste Management of Kumta Town in favour of Chief Officer, Town Municipal Council, Kumta instead of Sy.No.108A of Manaki Village.

All other conditions the Government Order dated: 27.11.2007 remain unchanged.

By Order and in the name of Governor of Karnataka,

**H.M. MALLIKARJUNA SWAMY**

P.R. 1177

Under Secretary to Government,

Forest, Ecology and Environment Department.

**Sub:** Grant of permission for usage of old existing approach road in respect of mining lease 2236 of M/s Sesa Goa Ltd., over an extent of 3.25 ha. of forest land in Nirthadi Reserve Forest, Holalkere Range of Chitradurga Division.

**Read:**
1. Letter No.A5(1)MNG.CR.27/08-09, dated: 31/7/2008.
2. State Government Order No.FEE 77 FFM 2006, dated: 09.10.2006.
3. Government of India guidelines No.11-8/2001-FC, dated 15.11.2001.

**Preamble:**

The State Government vide Order read at (2) above, have accorded approval for extension period of diversion of forest land w.e.f 11.07.06 up to 27.10.2012 for mining over an area of 163.5 ha. in Neerthadi Reserved Forest, Holalkere Range, Chitradurga Forest Division and approval was also accorded for transfer of mining lease to M/s Sesa Goa Limited, subject to certain conditions.

The Principal Chief Conservator of Forests had sent proposal vide his letter dated: 31/07/2008 read at (1) above for permission to use the old existing approach road in respect of mining lease No. 2236 of M/s Sesa Goa Limited over an extent of 3.25 ha. of forest land in Nirthadi Reserve Forest, HOlalkere Range, Chitradurga Division in the light of the guidelines issued by the Government of India in this letter No. 11-8/FC, dated: 15.11.2007 subject to certain conditions.

After careful consideration of the proposal, State Government vide Government of India guidelines read at (3) above has considered according permission to use the olds existing approach road in respect of mining lease No. 2236 of M/s Sesa Goa Limited, over an an extent of 3.25 ha. of forest land in Nirthadio Reserve Forest, Holalkere Range, Chitradurga Division.

The proposal has been examined in detail and hence the order.

**Govt. Order No:FEE 123 FFM 2008, Bangalore, Dated: 6th April 2009**

In the Circumstances explained in the preamble above, Government are pleased to accord permission to use the old existing approach road as per the Government of India guidelines Letter No.11-8/2001-FC, dated:15.11.2001 in respect of mining lease No.2236 over an extent of 3.25 ha. of forest land

in Nirthadi Reserve Forest, Holalkere Range, Chitradurga Division in favour of M/s Sesa Goa Limited subject to the following conditions.

1. Legal status of forest land shall remain unchanged.
2. No tree felling should be allowed.
3. No widening of road should be undertaken, without permission of the Central Government under the Forest (Conservation) Act, 1980.
4. No breaking of fresh forest land is carried out.
5. The above usage of existing road (3.25 ha.) subject to the payment of Net Present Value and Compensatory afforestation as per existing practices/provisions.
6. This permission is valid till the expiry of mining lease.
7. Any other condition that the State Government/Government of India/Principal Chief Conservator of Forests may impose from time to time in the interest of conservation, protection and developmet of forests.

By Order and in the name of Governor of Karnataka,

**H.M. MALLIKARJUNA SWAMY**

P.R. 1178

Under Secretary to Government,

Forest, Ecology and Environment Department.

**ಕಂದಾಯ ಸಚಿವಾಲಯ**

**ವಿಷಯ:** ಶ್ರೀ ಸಿ.ಜೆ. ಕೃಷ್ಣಕುಮಾರ್, ತಹಶೀಲ್ದಾರ್, ಪ್ರಸ್ತುತ ಪುರಸಭಾ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ಚಿತ್ರದುರ್ಗ ಇವರ ಜನ್ಮ ದಿನಾಂಕದ ತಿದ್ದುಪಡಿ ಕುರಿತು.

**ಓದಲಾಗಿದೆ:** 1. ಜಿಲ್ಲಾಧಿಕಾರಿಗಳು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಇವರ ಪತ್ರ ಸಂ: ಸಿಬ್ಬಂದಿ(1):ಸಿಆರ್:70/07–08, ದಿನಾಂಕ: 12.03.2008 ಮತ್ತು ದಿನಾಂಕ: 27.08.2007.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ. (1) ಜಿಲ್ಲಾಧಿಕಾರಿಗಳು, ಚಿತ್ರದುರ್ಗ ಇವರ ಪ್ರಸ್ತಾವನೆಯಲ್ಲಿ ಶ್ರೀ ಸಿ.ಜೆ. ಕೃಷ್ಣಕುಮಾರ್, ತಹಶೀಲ್ದಾರ್ 1999ನೇ ತಂಡ, ಪ್ರಸ್ತುತ ಪುರಸಭಾ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ಚಿತ್ರದುರ್ಗರವರು ಅರ್ಜಿ ಸಲ್ಲಿಸಿ, ಕರ್ನಾಟಕ ಉಚ್ಚ ನ್ಯಾಯಾಲಯದ ಆರ್‌ಎಸ್‌ಎಸಂ: 407/98, ದಿನಾಂಕ: 25.05.99ರ ಆದೇಶದನ್ವಯ ತಮ್ಮ ಜನ್ಮ ದಿನಾಂಕವನ್ನು 31.12.1965ರ ಬದಲಿಗೆ ದಿನಾಂಕ: 30.11.1966 ಎಂದು ಸೇವಾ ದಾಖಲೆಗಳಲ್ಲಿ ತಿದ್ದುಪಡಿ ಮಾಡಿಕೊಡುವಂತೆ ಕೋರಿ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಕರ್ನಾಟಕ ರಾಜ್ಯ ಸರ್ಕಾರಿ ನೌಕರರ (ವಯಸ್ಸು ನಿರ್ಧರಣೆ) ಕಾಯ್ದೆ 1974ರ ನಿಗದಿತ ಅವಧಿಯೊಳಗೆ ಜನ್ಮ ದಿನಾಂಕ ಬದಲಾವಣೆಗೆ ಅರ್ಜಿ ಸಲ್ಲಿಸಿರುವುದರಿಂದ ಅದೇ ಕಾಯ್ದೆಯ ಸೆಕ್ಷನ್ 5(3)ರಡಿ ವಿಶೇಷ ಅಧಿಕಾರಿಯನ್ನು ನೇಮಕಾತಿ ಮಾಡಿ ವಿಚಾರಣೆಯನ್ನು ಜರುಗಿಸಲು ನಿರ್ಧರಿಸಿದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂ:ಆರ್‌ಡಿ 147 ಎಎಸ್‌ಡಿ 2007, ದಿನಾಂಕ: 8ನೇ ಏಪ್ರಿಲ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸರ್ಕಾರವು ಶ್ರೀ ಸಿ.ಜೆ. ಕೃಷ್ಣಕುಮಾರ್, ತಹಶೀಲ್ದಾರ್ ಪ್ರಸ್ತುತ ಪುರಸಭಾ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ಚಿತ್ರದುರ್ಗ ಇವರ ಜನ್ಮ ದಿನಾಂಕದ ತಿದ್ದುಪಡಿ ಕುರಿತು ಕರ್ನಾಟಕ ರಾಜ್ಯ ಸರ್ಕಾರಿ ನೌಕರರ (ವಯೋ ನಿರ್ಧಾರ) ಕಾಯ್ದೆ 1974ರ ಸೆಕ್ಷನ್ 5(3)ರನ್ವಯ ಶ್ರೀ ಜಿ.ಎ. ಮೂಲಿಮನಿ, ಸಹಾಯಕ ವಾದೇಕ್ಷಕರು ಮತ್ತು ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ (ವ್ಯಾಜ್ಯ) ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ, ಬೆಂಗಳೂರು ಇವರನ್ನು ಈ ಪ್ರಕರಣದ ವಿಚಾರಣೆಯನ್ನು ಜರುಗಿಸಲು ಮಂಡನಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1179

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–3).

**ವಿಷಯ:** ಶ್ರೀ ಹೆಚ್. ನಂಜಯ್ಯ, ಹಿಂದಿನ ತಹಶೀಲ್ದಾರ್, ಹೊಸಕೋಟೆ, ಪ್ರಸ್ತುತ ತಹಶೀಲ್ದಾರ್, ತಿಪಟೂರು ತಾಲ್ಲೂಕು, ತುಮಕೂರು ಜಿಲ್ಲೆ ಇವರನ್ನು ಸೇವೆಯಿಂದ ಅಮಾನತ್ತು ಮಾಡುವ ಬಗ್ಗೆ.

**ಓದಲಾಗಿದೆ:** 1. ಜಿಲ್ಲಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರ ಪ್ರಸ್ತಾವನೆ ಸಂ: ಆರ್.ಆರ್.ಟಿ.ಸಿ.ಆರ್.165/08–09, ದಿನಾಂಕ: 06.04.2009.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ.(1)ರಲ್ಲಿ ಜಿಲ್ಲಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರು ಹೊಸಕೋಟೆ ತಾಲ್ಲೂಕಿನ ಅನುಗೊಂಡನಹಳ್ಳಿ ಹೋಬಳಿಯ ನಾರಾಯಣಕೆರೆ ಗ್ರಾಮದ ಸರ್ವೆ. ನಂ.131/3ರ ವಿಸ್ತೀರ್ಣ 1 ಎಕರೆ 25 ಗುಂಟೆ ಜಮೀನಿನ ಬಗ್ಗೆ ಉಪವಿಭಾಗಾಧಿಕಾರಿ, ದೊಡ್ಡಬಳ್ಳಾಪುರ ಉಪವಿಭಾಗ, ಬೆಂಗಳೂರು ರವರ ಪ್ರಕರಣ ಸಂ: ಎಲ್.ಆರ್.ಎಫ್ (ಎಚ್.ಕೆ.ಟಿ) 144/1998–99, ದಿನಾಂಕ: 07.04.2003ರ ಆದೇಶದಂತೆ ಅದು ಸೃಜಿಸಿದ ನಕಲಿ ಆದೇಶವಾಗಿದ್ದು ಈ ಬಗ್ಗೆ ಸುಳ್ಳು ದಾಖಲೆ ಸೃಷ್ಟಿಮಾಡಿ ಜಮೀನನ್ನು ಬೇರೆಯವರಿಗೆ ಮಾರಾಟ ಮಾಡಿರುವ ಶ್ರೀಮತಿ ವೆಂಕಟಮ್ಮ ಕೋಂ ಲೇಟ್ ಯಲ್ಲಪ್ಪರವರ ವಿರುದ್ಧ ಕ್ರಿಮಿನಲ್ ಮೊಕದ್ದಮೆ ಹೂಡಲು ಹಾಗೂ ಈ ರೀತಿ ಸುಳ್ಳು ಕಂದಾಯ ದಾಖಲೆ ಸೃಷ್ಟಿಸಲು ನೆರವಾದ ಕಂದಾಯ ಇಲಾಖೆಯ ಅಧಿಕಾರಿ/ನೌಕರರುಗಳನ್ನು ಗುರುತಿಸಿ ಇಲಾಖೆ ವಿಚಾರಣೆ ನಡೆಸಲು ಸರ್ಕಾರದ ಪತ್ರದಲ್ಲಿ ನಿರ್ದೇಶಿಸಲಾಗಿತ್ತು. ಅದರಂತೆ ಸರ್ವೆ ನಂ:131/3ರ ವಿಸ್ತೀರ್ಣ 1 ಎಕರೆ 25 ಗುಂಟೆ ಜಮೀನಿಗೆ ಸಂಬಂಧಿಸಿದಂತೆ, ಸೃಜಿಸಿದ ಆದೇಶ ಹೊರಡಿಸಲು ಕಾರಣ ಕರ್ತರಾದ ಸರ್ಕಾರಿ ನೌಕರರು ಹಾಗೂ ದೋಷದ ಮ್ಯುಟೇಷನ್ ಸೃಷ್ಟಿಗೆ ಕಾರಣಕರ್ತರಾದ ಸರ್ಕಾರಿ ಅಧಿಕಾರಿ/ ನೌಕರರನ್ನು ಗುರುತಿಸಿ ವರದಿ ನೀಡಲು ಅಪರ ಜಿಲ್ಲಾಧಿಕಾರಿಗೆ ಸೂಚನೆ ನೀಡಲಾಗಿತ್ತು. ಅದರಂತೆ ಸದರಿಯವರು ದಿನಾಂಕ: 04.04.2009ರಂದು ಹೊಸಕೋಟೆ ತಾಲ್ಲೂಕು ಕಛೇರಿಯಲ್ಲಿ ವಿಚಾರಣೆ ನಡೆಸಿ, ಜಿಲ್ಲಾಧಿಕಾರಿಗಳ ಕಛೇರಿಗೆ ವರದಿಯನ್ನು ನೀಡಿರುತ್ತಾರೆ. ದರಿ ವರದಿಯನ್ನು ದಾಖಲೆಗಳನ್ನು ಪರಿಶೀಲಿಸದೆ ಶ್ರೀಮತಿ ವೆಂಕಟಮ್ಮ ಕೋಂ ಲೇಟ್ ಯಲ್ಲಪ್ಪರವರ ಹೆಸರಿಗೆ ಖಾತೆ ಮಾಡಲು ಆದೇಶಿಸಿರುವ ಅಂದಿನ ತಹಶೀಲ್ದಾರರಾಗಿ ಕಾರ್ಯ ನಿರ್ವಹಿಸಿದ ಶ್ರೀ ಹೆಚ್. ನಂಜಯ್ಯ (ಹಾಲಿ ತಹಶೀಲ್ದಾರ್, ತಿಪಟೂರು ತಾಲ್ಲೂಕು) ಮತ್ತು ಆ ಸಮಯದಲ್ಲಿ ವಿಷಯ ನಿರ್ವಾಹಕರಾಗಿ ಕಾರ್ಯ ನಿರ್ವಹಿಸಿದ್ದ ಶ್ರೀ ಸಂಪಂಗಿರಾಮಯ್ಯ – ಪ್ರ.ದ.ಸಹಾಯಕ (ಆಗಸ್ಟ್ 2007ರಂದು ನಿವೃತ್ತಿ ಹೊಂದಿರುತ್ತಾರೆ) ರವರು ಪ್ರಮುಖ ಕಾರಣರಾಗಿರುತ್ತಾರೆಂದು ವರದಿ ಮಡಿರುತ್ತಾರೆ. ಈ ವರದಿ ಆಧಾರದ ಮೇಲೆ ಶ್ರಿ ಹೆಚ್.ನಂಜಯ್ಯ, ತಹಶೀಲ್ದಾರ್, ತಿಪಟೂರು ತಾಲ್ಲೂಕು ಹಾಗೂ ಶ್ರೀ ಸಂಪಂಗಿರಾಮಯ್ಯ, ನಿವೃತ್ತ ಪ್ರ.ದ. ಸಹಾಯಕರವರ ವಿರುದ್ಧ ಶಿಸ್ತು ಕ್ರಮ ಜರುಗಿಸಲು ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಜಿಲ್ಲಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆರವರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಪ್ರಕರಣದಲ್ಲಿ ಭಾಗಿಯಾದ ಶ್ರೀ ಹೆಚ್. ನಂಜಯ್ಯ, ಹಿಂದಿನ ತಹಶೀಲ್ದಾರ್ ಹೊಸಕೋಟೆ, ಪ್ರಸ್ತುತ ತಹಶೀಲ್ದಾರ್, ತಿಪಟೂರು ಇವರನ್ನು ಸೇವೆಯಿಂದ ತಕ್ಷಣದಿಂದ ಜಾರಿಗೆ ಬರುವಂತೆ ಅಮಾನತ್ತಿನಲ್ಲಿಡಲು ತೀರ್ಮಾನಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂ: ಆರ್‌ಡಿ 05 ಎಡಿಇ 2009, ಬೆಂಗಳೂರು, ದಿನಾಂಕ: 8ನೇ ಏಪ್ರಿಲ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 10(i) (ಡಿ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಹೆಚ್. ನಂಜಯ್ಯ ಹಿಂದಿನ ತಹಶೀಲ್ದಾರ್, ಹೊಸಕೋಟೆ ತಾಲ್ಲೂಕು, ಪ್ರಸ್ತುತ ತಹಶೀಲ್ದಾರ್, ತಿಪಟೂರು ತಾಲ್ಲೂಕು, ತುಮಕೂರು ಜಿಲ್ಲೆ, ಇವರ ವಿರುದ್ಧ ಇಲಾಖಾ ವಿಚಾರಣೆ/ ಕ್ರಿಮಿನಲ್ ಮೊಕದ್ದಮೆ ಕಾಯ್ದಿರಿಸಿ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸದರಿಯವರನ್ನು ಸೇವೆಯಿಂದ ಅಮಾನತ್ತುಗೊಳಿಸಿದೆ ಹಾಗೂ ಈ ಪ್ರಕರಣದಲ್ಲಿ ಭಾಗಿಯಾದ ಶ್ರೀ ಸಂಪಂಗಿರಾಮಯ್ಯ, ಹಿಂದಿನ ಪ್ರಥಮ ದರ್ಜೆ ಸಹಾಯಕ, ಹೊಸಕೋಟೆ ತಾಲ್ಲೂಕು ಕಛೇರಿ, ಪ್ರಸ್ತುತ ನಿವೃತ್ತ ಇವರ ವಿರುದ್ಧ ಕೆ.ಸಿ.ಎಸ್.ಆರ್ ನಿಯಮ 214 ರಡಿಯಲ್ಲಿ ಇಲಾಖಾ ವಿಚಾರಣೆ ನಡೆಸಲು ತೀರ್ಮಾನಿಸಿದೆ.

ಅಮಾನತ್ತಿನ ಅವಧಿಯಲ್ಲಿ ಸದರಿ ಅಧಿಕಾರಿ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 98 ರನ್ವಯ ಜೀವನಾಧಾರ ಭತ್ಯೆ ಪಡೆಯಲು ಅರ್ಹರಿರುತ್ತಾರೆ. ಅಮಾನತ್ತಿನ ಅವಧಿಯಲ್ಲಿ ಜಿಲ್ಲಾಧಿಕಾರಿಗಳು, ತುಮಕೂರು ಜಿಲ್ಲೆ, ತುಮಕೂರು ಇವರ ಅನುಮತಿ ಪಡೆಯದೇ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ ಹಾಗೂ ಪ್ರಾದೇಶಿಕ ಆಯುಕ್ತರ ಕಛೇರಿ, ಮೈಸೂರು ಇಲ್ಲಿ ಕಾರ್ಯ ನಿರ್ವಹಿಸುತ್ತಿರುವ ಶ್ರೀಮತಿ ಬಿ.ಆರ್. ರೂಪ, ತಹಶೀಲ್ದಾರ್ ಇವರನ್ನು ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಶ್ರೀ ಹೆಚ್.ನಂಜಯ್ಯ ಇವರ ಸ್ಥಳಕ್ಕೆ ವರ್ಗಾಯಿಸಿ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1180

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–3).

**ಕಾರ್ಮಿಕ ಸಚಿವಾಲಯ**

**ವಿಷಯ:** ಕಾರ್ಖಾನೆ ಮತ್ತು ಬಾಯ್ಲರುಗಳ ಇಲಾಖೆಯ ಮುಂದುವರೆದ ಯೋಜನಾ ಕಾರ್ಯಕ್ರಮಗಳನ್ನು 2009–10ನೇ ಆರ್ಥಿಕ ವರ್ಷಕ್ಕೆ ಮುಂದುವರೆಸುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ಕಾರ್ಖಾನೆ ಮತ್ತು ಬಾಯ್ಲರುಗಳ ಇಲಾಖೆ ಇವರ ಪತ್ರ ಸಂ.ಇಎಸ್‌ಟಿ–1/ಆರ್‌ಪಿಪಿ/ಸಿಆರ್–14/2008–09, ದಿನಾಂಕ: 13.03.2009.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ನಿರ್ದೇಶಕರು, ಕಾರ್ಖಾನೆ ಮತ್ತು ಬಾಯ್ಲರುಗಳ ಇಲಾಖೆ ಇವರ ದಿನಾಂಕ:13.03.2009ರ ಪತ್ರದಲ್ಲಿ ಕಾರ್ಖಾನೆ ಮತ್ತು ಬಾಯ್ಲರುಗಳ ಇಲಾಖೆಗೆ ಸಂಬಂಧಿಸಿದಂತೆ, 2008–09ನೇ ಸಾಲಿನಲ್ಲಿ ಮುಂದುವರೆದ ಯೋಜನಾ ಕಾರ್ಯಕ್ರಮಗಳನ್ನು ಮತ್ತು ಯೋಜನೆ ಅಡಿ ಮುಂದುವರೆಸಲಾದ ಹುದ್ದೆಗಳನ್ನು 2009–10ನೇ ಸಾಲಿನಲ್ಲಿ ಮುಂದುವರೆಸುವಂತೆ ಕೋರಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. 2008–09ನೇ ಸಾಲಿನಲ್ಲಿನ ಯೋಜನಾ ಕಾರ್ಯಕ್ರಮಗಳನ್ನು ಮತ್ತು ಯೋಜನೆ ಅಡಿ ಇರುವ ಹುದ್ದೆಗಳನ್ನು 2009–10ನೇ ಸಾಲಿನಲ್ಲಿ ಮುಂದುವರೆಸುವ ಬಗ್ಗೆ ಕಾರ್ಮಿಕ ಇಲಾಖೆಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ದಿನಾಂಕ: 21.03.2009ರಂದು ನಡೆದ ಸಭೆಯಲ್ಲಿ ವಿವರವಾಗಿ ಚರ್ಚಿಸಿ ಯೋಜನೆ ಲೆಕ್ಕ ಶೀರ್ಷಿಕೆ "2230–01–102–0–01 (ಪ್ಲಾನ್)", "ವರ್ಕಿಂಗ್ ಕಂಡೀಷನ್ಸ್ ಅಂಡ್ ಸೇಫ್ಟಿ – ಇನ್ಸ್‌ಪೆಕ್ಟರ್ಸ್ ಆಫ್ ಫ್ಯಾಕ್ಟರೀಸ್" ಈ ಯೋಜನೆ ಅಡಿಯಲ್ಲಿ 18 ಹುದ್ದೆಗಳನ್ನು 2009–10ನೇ ಸಾಲಿಗೆ ಮುಂದುವರೆಸಲು ಹಾಗೂ ಲೆಕ್ಕ ಶೀರ್ಷಿಕೆ "2230–01–102–0–01–015–ಪೂರಕ ವೆಚ್ಚಗಳು (ಯೋಜನೆ)" ಇದರ ಅಡಿಯಲ್ಲಿ "ಮಹಿಳಾ ಹಕ್ಕು ತರಬೇತಿ ಮತ್ತು ಸುರಕ್ಷತಾ ಉಸ್ತುವಾರಿ ಕೇಂದ್ರ" ಈ ಯೋಜನೆಯನ್ನು 2009–10ನೇ ಸಾಲಿಗೆ ಮುಂದುವರೆಸಲು ಸಭೆಯು ತೀರ್ಮಾನಿಸಿತು. ಆ ಪ್ರಕಾರ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ ಸಂಖ್ಯೆ:ಕಾಇ 16 ಕಾಬಾಸೇ 2009, ಬೆಂಗಳೂರು, ದಿನಾಂಕ: 3ನೇ ಏಪ್ರಿಲ್ 2009**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ ಹಾಗೂ ದಿ:21.03.2009ರಂದು ನಡೆದ ಸಭೆಯ ನಡವಳಿಯಂತೆ ಕಾರ್ಖಾನೆ ಮತ್ತು ಬಾಯ್ಲರುಗಳ ಇಲಾಖೆಗೆ ಸಂಬಂಧಿಸಿದಂತೆ 2009–10ನೇ ಸಾಲಿನಲ್ಲಿ ಮುಂದುವರೆದ ಯೋಜನಾ ಕಾರ್ಯಕ್ರಮಗಳು ಈ ಕೆಳಗಿನಂತಿವೆ:–

(i) 2008–09ನೇ ಸಾಲಿನಲ್ಲಿ ಮುಂದುವರೆದ ಯೋಜನಾ ಕಾರ್ಯಕ್ರಮವಾದ "ವರ್ಕಿಂಗ್ ಕಂಡೀಷನ್ಸ್ ಅಂಡ್ ಸೇಫ್ಟಿ – ಇನ್ಸ್‌ಪೆಕ್ಟರ್ ಆಫ್ ಫ್ಯಾಕ್ಟರೀಸ್" ಈ ಯೋಜನೆಯಡಿಯಿರುವ ಹುದ್ದೆಗಳನ್ನು 2009–10ನೇ ಸಾಲಿನಲ್ಲಿ ಮುಂದುವರೆಸುವುದು.

(ii) 2007–08ನೇ ಸಾಲಿನಲ್ಲಿ ಕೈಗೆತ್ತಿಕೊಳ್ಳಲಾಗಿದ್ದ "ಮಹಿಳಾ ಹಕ್ಕು ತರಬೇತಿ ಮತ್ತು ಸುರಕ್ಷತಾ ಉಸ್ತುವಾರಿ ಕೇಂದ್ರ" ಈ ಯೋಜನೆಯನ್ನು 2009–10ನೇ ಸಾಲಿನಲ್ಲಿ ಮುಂದುವರೆಸುವುದು.

ಈ ಮೇಲಿನ ಎರಡು ಯೋಜನಾ ಕಾರ್ಯಕ್ರಮಗಳನ್ನು ಈ ಆದೇಶಕ್ಕೆ ಲಗತ್ತಿಸಿದ ಅನುಬಂಧದಲ್ಲಿ ಇರುವಂತೆ 2009–10ನೇ ಸಾಲಿಗೆ ಮುಂದುವರೆಸಲು ಈ ಕೆಳಕಾಣಿಸಿದ ಷರತ್ತುಗಳಿಗೊಳಪಟ್ಟು ಮಂಜೂರಾತಿ ನೀಡಲಾಗಿದೆ.

1. 2008–09ನೇ ಸಾಲಿನಲ್ಲಿ ಮುಂದುವರೆದ ಯೋಜನಾ ಕಾರ್ಯಕ್ರಮಗಳನ್ನು ಮಾತ್ರ 2009–10ನೇ ಸಾಲಿನಲ್ಲಿ ಮುಂದುವರೆಸಬೇಕು.
2. 2008–09ನೇ ಸಾಲಿನಲ್ಲಿ ಮುಂದುವರೆದ ಯೋಜನಾ ಹುದ್ದೆಗಳು ರದ್ದಾಗಿದ್ದಲ್ಲಿ, ಅಂತಹವುಗಳನ್ನು 2009–10ನೇ ಸಾಲಿನಲ್ಲಿ ಮುಂದುವರೆದ ಯೋಜನಾ ಕಾರ್ಯಕ್ರಮಗಳಿಂದ ತೆಗೆದು ಹಾಕುವುದು ಹಾಗೂ 2008–09ನೇ ಸಾಲಿನಲ್ಲಿ ಯೋಜನಾ ಕಾರ್ಯಕ್ರಮಗಳನ್ನು ಕೈಬಿಟ್ಟಿದ್ದರೆ ಅಂತಹ ಕಾರ್ಯಕ್ರಮಗಳನ್ನು 2009–10ನೇ ಸಾಲಿನಲ್ಲಿ ಯೋಜನೆಯಡಿಯಲ್ಲಿ ಮುಂದುವರೆದ ಕಾರ್ಯಕ್ರಮಗಳ ಪಟ್ಟಿಯಿಂದ ತೆಗೆದು ಹಾಕಬೇಕು.
3. ಮುಂದುವರೆದ ಯೋಜನಾ ಕಾರ್ಯಕ್ರಮಗಳಲ್ಲಿ ಯಾವುದೇ ಹೊಸ ಘಟಕಗಳ ಪ್ರಸ್ತಾವನೆಗಳು, ವಾಹನ ಖರೀದಿ/ವಾಹನಗಳನ್ನು ಬಾಡಿಗೆ ಆಧಾರದ ಮೇಲೆ ಪಡೆಯುವ ಪ್ರಸ್ತಾವನೆಗಳು ಇದ್ದಲ್ಲಿ ಅವುಗಳಿಗೆ ಪ್ರತ್ಯೇಕವಾದ ಪ್ರಸ್ತಾವನೆಗಳನ್ನು ಸಲ್ಲಿಸಿ, ನಿಯಮಾನುಸಾರ ಮಂಜೂರಾತಿ ಪಡೆಯಬೇಕು.
4. ಆರ್ಥಿಕ ಇಲಾಖೆಯು ಕಾಲಕಾಲಕ್ಕೆ ಹೊರಡಿಸುವ ಆರ್ಥಿಕ ಮಿತವ್ಯಯ ಆದೇಶಗಳನ್ನು ಕಟ್ಟುನಿಟ್ಟಾಗಿ ಪಾಲಿಸಬೇಕು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 96, ದಿ:10.07.1996ರನ್ವಯ ಇಲಾಖಾ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಲಾಗಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ಶಿವರಾಮ ಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಾರ್ಮಿಕ ಇಲಾಖೆ (ಕಾರ್ಖಾನೆ ಮತ್ತು ಬಾಯ್ಲರುಗಳು).

**ಅನುಬಂಧ–1**

**ಕಾರ್ಖಾನೆ ಮತ್ತು ಬಾಯ್ಲರುಗಳ ಇಲಾಖೆಗೆ ಸಂಬಂಧಿಸಿದಂತೆ 2009–10ನೇ ಸಾಲಿಗೆ ಯೋಜನಾ ಸ್ಕೀಂನಡಿ ಮುಂದುವರೆಸಬೇಕಾದ ಹುದ್ದೆಗಳ ವಿವರ.**

| ಕ್ರ. ಸಂ. | ಸ್ಕೀಂನ ಹೆಸರು ಮತ್ತು ಖರ್ಚನ್ನು ಕಳೆಯಬೇಕಾದ ಲೆಕ್ಕ ಶೀರ್ಷಿಕೆ | 2009–10ನೇ ಸಾಲಿಗೆ ಮಂಜೂರಾಗಿರುವ ಬಜೆಟ್ (ರೂ.ಲಕ್ಷಗಳಲ್ಲಿ) | ಹುದ್ದೆಗಳ ಮಂಜೂರಾತಿ ಆದೇಶ ಮತ್ತು ದಿನಾಂಕ | ಹುದ್ದೆವಗಳ ವಿವರ ಮತ್ತು ವೇತನ ಶ್ರೇಣಿ | ಹುದ್ದೆಗಳ ಸಂಖ್ಯೆ | ಹುದ್ದೆಗಳ ಕೇಂದ್ರ ಕಾರ್ಯಸ್ಥಾನ/ಕಛೇರಿ |
|---|---|---|---|---|---|---|
| | ಕಾರ್ಖಾನೆ ಮತ್ತು ಬಾಯ್ಲರುಗಳ ಇಲಾಖೆ, ಯೋಜನಾ ಸ್ಕೀಂಗಳು "ವರ್ಕಿಂಗ್ ಕಂಡೀಷನ್ಸ್ ಅಂಡ್ ಸೇಫ್ಟಿ – ಇನ್ಸ್‌ಪೆಕ್ಟರ್ಸ್ ಆಫ್ ಫ್ಯಾಕ್ಟರೀಸ್" (ಲೆಕ್ಕಶೀರ್ಷಿಕೆ 2230–01–102–0–01 ಪ್ಲಾನ್) | 53.84 | ಕಾಇ 106 ಕಾಬಾಸೇ 1998. ದಿ:25.09.1998 | ಕಾರ್ಖಾನೆಗಳ ಜಂಟಿ ನಿರ್ದೇಶಕರು (ರೂ.20025–28275) | 1 | ಕಾರ್ಖಾನೆಗಳ ಜಂಟಿ ನಿರ್ದೇಶಕರು–2, ಬೆಂಗಳೂರು. |
| | | | | ಕಾರ್ಖಾನೆಗಳ ಉಪ ನಿರ್ದೇಶಕರು (ರೂ.18150–26925) | 1 | ಮಂಗಳೂರು |
| | | | | ಕಾರ್ಖಾನೆಗಳ ಉಪ ನಿರ್ದೇಶಕರು (ರೂ.18150–26925) | 1 | ಬೆಳಗಾಂ |
| | | | | ಬಾಯ್ಲರುಗಳ ಉಪ ನಿರ್ದೇಶಕರು (ರೂ.18150–26925) | 1 | ದಾವಣಗೆರೆ |
| | | | ಕಾಇ 144 ಕಾಬಾಸೇ 97. (I), ದಿ:17.01.1998 | ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರು (ರೂ.14050–25050) | 1 | ಮಂಗಳೂರು |
| | | | | ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರು (ರೂ.14050–25050) | 1 | ಬೆಳಗಾಂ |
| | | | ಕಾಇ 201 ಕಾಬಾಸೇ 98. (II), ದಿ:17.01.1998 | ಬಾಯ್ಲರುಗಳ ಸಹಾಯಕ ನಿರ್ದೇಶಕರು (ಬಿಟಿಟಿಇಸಿ ಸೆಲ್) (ರೂ.11400–21600) | 1 | ಬೆಂಗಳೂರು |
| | | | | ಪ್ರಥಮ ದರ್ಜೆ ಸಹಾಯಕರು (ರೂ.7275–13350) | 1 | ಬಾಯ್ಲರುಗಳ ಹಿರಿಯ ಸಹಾಯಕ ನಿರ್ದೇಶಕರ ಕಛೇರಿ, ಮಂಗಳೂರು. |
| | | | ಕಾಇ 201 ಕಾಬಾಸೇ 1995, ದಿ:26.12.1995. | ಪ್ರಥಮ ದರ್ಜೆ ಸಹಾಯಕರು (ರೂ.7275–13350) | 4 | ಪ್ರಧಾನ ಕಛೇರಿ, ಬೆಂಗಳೂರು. |
| | | | | ಶೀಘ್ರಲಿಪಿಗಾರರು (ರೂ.7275–13350) | 2 | ಪ್ರಧಾನ ಕಛೇರಿ, ಬೆಂಗಳೂರು. |

| ಕ್ರ. ಸಂ. | ಸ್ಕೀಂನ ಹೆಸರು ಮತ್ತು ಖರ್ಚನ್ನು ಕಳೆಯಬೇಕಾದ ಲೆಕ್ಕ ಶೀರ್ಷಿಕೆ | 2009–10ನೇ ಸಾಲಿಗೆ ಮಂಜೂರಾಗಿರುವ ಬಜೆಟ್ (ರೂ.ಲಕ್ಷಗಳಲ್ಲಿ) | ಹುದ್ದೆಗಳ ಮಂಜೂರಾತಿ ಆದೇಶ ಮತ್ತು ದಿನಾಂಕ | ಹುದ್ದೆವಗಳ ವಿವರ ಮತ್ತು ವೇತನ ಶ್ರೇಣಿ | ಹುದ್ದೆಗಳ ಸಂಖ್ಯೆ | ಹುದ್ದೆಗಳ ಕೇಂದ್ರ ಕಾರ್ಯಸ್ಥಾನ/ಕಛೇರಿ |
|---|---|---|---|---|---|---|
| | | | ಕಾಇ 174 ಕಾಬಾಸೇ 1997, ದಿ:17.01.1998 | ಬೆರಳಚ್ಚುಗಾರರು, (ರೂ.5800–10200) | 1 | ಪ್ರಧಾನ ಕಛೇರಿ, ಬೆಂಗಳೂರು. |
| | | | | ಬೆರಳಚ್ಚುಗಾರರು, (ರೂ.5800–10200) | 1 | ಕಾರ್ಖಾನೆಗಳ ಸಹಾಯಕ ನಿರ್ದೇಶಕರ ಕಛೇರಿ, ಗುಲ್ಬರ್ಗಾ. |
| | | | | ಸೇವಕ, (ರೂ.4800–7275) | 1 | ಬಾಯ್ಲರುಗಳ ಹಿರಿಯ ಸಹಾಯಕ ನಿರ್ದೇಶಕರ ಕಛೇರಿ, ಮಂಗಳೂರು. |
| | | | ಕಾಇ 144 ಕಾಬಾಸೇ 97(1), ದಿ:17.01.1998 | ವಾಹನ ಚಾಲಕರು (ರೂ.5800–10200) | 1 | ಪ್ರಧಾನ ಕಛೇರಿ, ಬೆಂಗಳೂರು |
| | **ಮೊತ್ತ** | **53.84** | | **ಒಟ್ಟು ಹುದ್ದೆಗಳು** | **18** | |

**ಬಿ. ಶಿವರಾಮ ಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಾರ್ಮಿಕ ಇಲಾಖೆ (ಕಾರ್ಖಾನೆ ಮತ್ತು ಬಾಯ್ಲರುಗಳು).

**ಅನುಬಂಧ–2**

**ಕಾರ್ಖಾನೆ ಮತ್ತು ಬಾಯ್ಲರುಗಳ ಇಲಾಖೆಗೆ ಸಂಬಂಧಿಸಿದಂತೆ 2009–10ನೇ ಸಾಲಿಗೆ ಯೋಜನಾ ಸ್ಕೀಂ ಅಡಿ ಯೋಜನೆಗಳ ವಿವರ.**

| ಕ್ರ. ಸಂ. | ಸ್ಕೀಂನ ಹೆಸರು ಮತ್ತು ಖರ್ಚನ್ನು ಕಳೆಯಬೇಕಾದ ಲೆಕ್ಕ ಶೀರ್ಷಿಕೆ | 2009–10ನೇ ಸಾಲಿಗೆ ಮಂಜೂರಾಗಿರುವ ಬಜೆಟ್ (ರೂ.ಲಕ್ಷಗಳಲ್ಲಿ) | ಯೋಜನೆಯ ಮಂಜೂರಾತಿ ಆದೇಶ ಮತ್ತು ದಿನಾಂಕ | ಯೋಜನೆಯನ್ನು ಮುಂದುವರೆಸಲು ಬೇಕಾದ ಮೂಲಭೂತ ಸೌಕರ್ಯ, ಸಾಧನಾ ಸಲಕರಣೆಗಳ ವಿವರಗಳು | ಸಂಖ್ಯೆ | ಒಟ್ಟು ರೂ. (ಲಕ್ಷಗಳಲ್ಲಿ) |
|---|---|---|---|---|---|---|
| | ಮಹಿಳಾ ಹಕ್ಕು ತರಬೇತಿ ಮತ್ತು ಸುರಕ್ಷತಾ ಉಸ್ತುವಾರಿ ಕೇಂದ್ರ (ಲೆಕ್ಕಶೀರ್ಷಿಕೆ: 2230–01–102–0–01–015 – ಪೂರಕ ವೆಚ್ಚಗಳು) | 29.19 | ಕಾಇ 27 ಕಾಬಾಸೇ 2007. ದಿ:20.09.2007 | ಎಲ್‌ಸಿಡಿ ಪ್ರೊಜೆಕ್ಟರ್ | 2 | 1.5 |
| | | | | ಲ್ಯಾಪ್‌ಟಾಪ್ | 2 | 1.0 |
| | | | | ಮಲ್ಟಿಫಂಕ್ಷನಲ್ ಪ್ರಿಂಟರ್ | 2 | 0.60 |
| | | | | ಯು.ಪಿ.ಎಸ್. | 8 | 3.36 |
| | | | | **ಒಟ್ಟು** | **6.46** | |

| ಕ್ರ. ಸಂ. | ಸ್ಕೀಂನ ಹೆಸರು ಮತ್ತು ಖರ್ಚನ್ನು ಕಳೆಯಬೇಕಾದ ಲೆಕ್ಕ ಶೀರ್ಷಿಕೆ | 2009–10ನೇ ಸಾಲಿಗೆ ಮಂಜೂರಾಗಿರುವ ಬಜೆಟ್ (ರೂ.ಲಕ್ಷಗಳಲ್ಲಿ) | ಯೋಜನೆಯ ಮಂಜೂರಾತಿ ಆದೇಶ ಮತ್ತು ದಿನಾಂಕ | ಯೋಜನೆಯನ್ನು ಮುಂದುವರೆಸಲು ಬೇಕಾದ ಮೂಲಭೂತ ಸೌಕರ್ಯ, ಸಾಧನಾ ಸಲಕರಣೆಗಳ ವಿವರಗಳು | ಸಂಖ್ಯೆ | ಒಟ್ಟು ರೂ. (ಲಕ್ಷಗಳಲ್ಲಿ) |
|---|---|---|---|---|---|---|
| | | | | ಮಹಿಳಾ ಕಾರ್ಮಿಕರ ಹಕ್ಕು ಮತ್ತು ಸುರಕ್ಷತೆ–ಕೈಪಿಡಿ ಮುದ್ರಣ, ಕರ್ನಾಟಕ ರಾಜ್ಯ ಕಾನೂನು ಸೇವಾ ಪ್ರಾಧಿಕಾರ ವತಿಯಿಂದ ಹೊರತಂದಿರುವ ಪುಸ್ತಕ ಖರೀದಿ, ದೂರವಾಣಿ, ಜೆರಾಕ್ಸ್ ಇತ್ಯಾದಿಗಳ ನಿರ್ವಹಣಾ ವೆಚ್ಚ | – | 1.73 |
| | | | | **ತರಬೇತಿ ಕಾರ್ಯಕ್ರಮಗಳಿಗಾಗಿ–ವಲಯ ಕಛೇರಿಗಳ ಹಂತದಲ್ಲಿ ಭರಿಸಬೇಕಾದ ವೆಚ್ಚಗಳು** | | |
| | | | | 8 ವಲಯ ಕಛೇರಿಗಳ ನೋಡಲ್ ಅಧಿಕಾರಿಗಳಿಗೆ ವಾಹನಗಳನ್ನು ಬಾಡಿಗೆ ಆಧಾರದ ಮೇಲೆ ಒದಗಿಸುವುದು. | 8 ವಾಹನಗಳು | 13.20 |
| | | | | ಉಪಹಾರ, ಟೀ ಇತ್ಯಾದಿ | – | 3.90 |
| | | | | ಉಪನ್ಯಾಸಕರಿಗೆ ಗೌರವಧನ ಪ್ರಯಾಣ ಭತ್ಯೆ ದಿನಭತ್ಯೆ | – | 1.80 |
| | | | | ಲೇಖನ ಸಾಮಗ್ರಿ, ವಿದ್ಯುನ್ಮಾನ ಯಂತ್ರಗಳ ನಿರ್ವಹಣೆ, ಇತ್ಯಾದಿ ಪ್ರಾಸಂಗಿಕ ವೆಚ್ಚಗಳು | – | 1.35 |
| | | | | ತರಬೇತಿ ಹಾಲ್‌ಗೆ ಬಾಡಿಗೆ | – | 0.75 |
| | | | | **ಒಟ್ಟು** | | **29.19** |

**ಬಿ. ಶಿವರಾಮ ಗೌಡ**

ಪಿ.ಆರ್. 1181

ಸರ್ಕಾರದ ಅಧೀನ ಕಾರ್ಯದರ್ಶಿ, ಕಾರ್ಮಿಕ ಇಲಾಖೆ (ಕಾರ್ಖಾನೆ ಮತ್ತು ಬಾಯ್ಲರುಗಳು).

## ಸಹಕಾರ ಸಚಿವಾಲಯ

**ವಿಷಯ:** ಕೋಲಾರ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ್ ನಿಯಮಿತ ಇದರ ವಿಶೇಷಾಧಿಕಾರಿ ಅವಧಿ ವಿಸ್ತರಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಸಿಓ 164 ಸಿಎಲ್‌ಎಂ 2008, ದಿನಾಂಕ:30.09.2008.

2. ಸಹಕಾರ ಸಂಘಗಳ ಜಂಟಿ ನಿಬಂಧಕರ (ಪತ್ತು) ಇವರ ಪತ್ರ ಸಂಖ್ಯೆ:ಸಿಆರ್‌ಡಿ/81/ಸಿಎಬಿ–1/2003–04, ದಿನಾಂಕ: 26.02.2009.

**ಪ್ರಸ್ತಾವನೆ:**

ಕೋಲಾರ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕಿನ ವಿಶೇಷಾಧಿಕಾರಿಯ ಅವಧಿಯನ್ನು ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ ದಿನಾಂಕ:01.04.2008 ರಿಂದ 31.03.2009ರವರೆಗೆ ವಿಸ್ತರಿಸಲು ಅನುಮತಿ ನೀಡಲಾಗಿದೆ. ಮುಂದುವರೆದು, ಬ್ಯಾಂಕಿನಲ್ಲಿ ಠೇವಣಿದಾರರಿಂದ ಠೇವಣಿ ಮೊತ್ತದ ವಾಪಸಾತಿಗಾಗಿ ಮತ್ತು ಸದಸ್ಯರಿಂದ ಹೊಸ ಸಾಲಕ್ಕಾಗಿ ತೀವ್ರ ಒತ್ತಡ ಇರುವುದರಿಂದ ಹಾಗೂ ಬ್ಯಾಂಕಿಂಗ್ ನಿಯಂತ್ರಣ ಅಧಿನಿಯಮ 1949ರ ಪ್ರಕರಣ 11(1)ನ್ನು ಪಾಲನೆ ಮಾಡದ ಕಾರಣದಿಂದ ದಿನಾಂಕ:01.04.2009ರಿಂದ ಅನ್ವಯವಾಗುವಂತೆ ಮುಂದಿನ ಒಂದು ವರ್ಷದ ಅವಧಿಗೆ ವಿಶೇಷಾಧಿಕಾರಿಗಳ ಅವಧಿಯನ್ನು, ವಿಸ್ತರಿಸಲು ಮೇಲೆ ಓದಲಾದ (2)ರ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಓ 164 ಸಿಎಲ್‌ಎಂ 2008, ಬೆಂಗಳೂರು, ದಿನಾಂಕ: 6ನೇ ಏಪ್ರಿಲ್ 2009**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಸದರಿ ಅಧಿನಿಯಮದ ಪ್ರಕರಣ 31(1) ಈ ಕೆಳಕಂಡ ಮಾರ್ಪಾಟುಗಳೊಂದಿಗೆ ಕೋಲಾರ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿಯಮಿತ, ಕೋಲಾರ ಇದಕ್ಕೆ ಅನ್ವಯವಾಗತಕ್ಕದ್ದೆಂದು ನಿರ್ದೇಶಿಸುತ್ತದೆ. ಎಂದರೆ:–

**"31ರ ಪ್ರಕರಣದಲ್ಲಿ,**

(1)ನೇ ಉಪಪ್ರಕರಣದಲ್ಲಿರುವ **"ಒಂದು ವರ್ಷ"** ಎಂಬ ಪದಕ್ಕೆ ಬದಲಾಗಿ **"ಅರವತ್ತೆರಡು ತಿಂಗಳು"** ಎಂಬುದಾಗಿ ಪ್ರತಿಯೋಜಿಸತಕ್ಕದ್ದು.

**ಸೂಚನೆ:** ಪ್ರಕರಣ 31(1)ಕ್ಕೆ ಮಾಡಿದ ಈ ಮಾರ್ಪಡು ದಿನಾಂಕ: 31.03.2010ರವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿಯು ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣ 31(1)ರ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1182

**ಆರ್.ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ, ಸರ್ಕಾರದ ಜಂಟಿ ಕಾರ್ಯದರ್ಶಿ, ಸಹಕಾರ ಇಲಾಖೆ.

## ಶಿಕ್ಷಣ ಸಚಿವಾಲಯ

**ವಿಷಯ:** 2008–09ನೇ ಸಾಲಿಗೆ ಕೇಂದ್ರ ಸರ್ಕಾರದಿಂದ ಅಕ್ಷರ ದಾಸೋಹ ಕಾರ್ಯಕ್ರಮ MME ಅಡಿಯಲ್ಲಿ ಮೌಲ್ಯಮಾಪನ ಕಾರ್ಯಕ್ರಮಕ್ಕೆ ಮತ್ತು ಪಾತ್ರೆ ಪರಿಕರ ಖರೀದಿಗಾಗಿ ಹಣ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ:** 1. ಭಾರತ ಸರ್ಕಾರದ ಸ್ಕೂಲ್ MHRD ಸ್ಕೂಲ್ ಎಜುಕೇಶನ್ ಮತ್ತು ಲಿಟರಸಿ ಇಲಾಖೆ (MDM Division) ಇವರ ಪತ್ರ ಸಂಖ್ಯೆ: F.No. 3-2-2008-Desk MDM-2-2 ದಿನಾಂಕ: 09.09.2008.

2. ಸಹನಿರ್ದೇಶಕರು, ಮಧ್ಯಾಹ್ನ ಉಪಹರ ಯೋಜನೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಎಂ 06–ಆದಾ ಅನುದಾನ 01 2008–09, ದಿನಾಂಕ: 03.03.2009.

**ಪ್ರಸ್ತಾವನೆ:**

ಕೇಂದ್ರ ಸರ್ಕಾರದ Management Monitoring and Evaluation ಅಡಿಯಲ್ಲಿ ಕರ್ನಾಟಕ ರಾಜ್ಯಕ್ಕೆ ರೂ. 146.45 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದ್ದು, ಈ ಮೊತ್ತದಲ್ಲಿ Management Monitoring and Evaluation ಕಾರ್ಯಕ್ರಮದಡಿ 2008–09ನೇ ಸಾಲಿಗೆ ಅಕ್ಷರ ದಾಸೋಹ ಮೌಲ್ಯ ಮಾಪನ ಕಾರ್ಯಕ್ರಮಕ್ಕೆ ಹೆಚ್ಚುವರಿಯಾಗಿ ಬೇಕಾಗಿರುವ ರೂ. 38.46 ಲಕ್ಷಗಳನ್ನು ಹಾಗೂ ಉಳಿಕೆ ರೂ. 107.99 ಲಕ್ಷಗಳನ್ನು 1807 ಜಿಲ್ಲಾವಾರು ಅಡುಗೆ ಕೇಂದ್ರಗಳಲ್ಲಿ ಪ್ರಾಥಮಿಕ ಅಡುಗೆ ಕೇಂದ್ರಗಳಿಗೆ ತಲಾ ರೂ. 5000ದಂತೆ ಪ್ರೌಢಶಾಲೆ ಅಡುಗೆ ಕೇಂದ್ರಗಳಿಗೆ ತಲಾ ರೂ. 8000ದಂತೆ ಪಾತ್ರೆ ಪರಿಕರಗಳ ಖರೀದಿಗಾಗಿ ಮರು ಹಂಚಿಕೆ ಮಾಡಿ ಅನುಬಂಧದಲ್ಲಿ ನಿಗದಿಪಡಿಸಿದಂತೆ ಒಟ್ಟು ರೂ. 146.45 ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡಿ ಆದೇಶ ಹೊರಡಿಸುವಂತೆ ಮಧ್ಯಾಹ್ನ ಉಪಾಹಾರ ಯೋಜನೆಯ ಸಹ ನಿರ್ದೇಶಕರು ಮೇಲೆ ಓದಲಾದ ಕ್ರಮಾಂಕ (2)ರ ದಿನಾಂಕ: 03.03.2009ರ ಪ್ರಸ್ತಾವನೆಯಲ್ಲಿ ಕೋರಿದ್ದಾರೆ.

ಸರ್ಕಾರವು ಪ್ರಸ್ತಾವನೆಯಲ್ಲಿರುವ ಅಂಶವನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ: 21 ಎಂಎಂಎಸ್ 2009, ಬೆಂಗಳೂರು, ದಿನಾಂಕ: 31ನೇ ಮಾರ್ಚ್ 2009**

**[ಇಡಿ: 54 :ಸ್ವೀಮರ(ಯುನಿಕ್) 2009, ದಿನಾಂಕ: 31ನೇ ಮಾರ್ಚ್ 2009]**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಕೇಂದ್ರ ಸರ್ಕಾರವು 2008–09ನೇ ಸಾಲಿಗೆ Management monitoring and evaluation ಕಾರ್ಯಕ್ರಮದಡಿಯಲ್ಲಿ ಬಿಡುಗಡೆ ಮಾಡಿರುವ 146.45 ಲಕ್ಷಗಳಲ್ಲಿ ಅಕ್ಷರ ದಾಸೋಹ ಮೌಲ್ಯ ಮಾಪನ ಕಾರ್ಯಕ್ರಮಕ್ಕೆ ಹೆಚ್ಚುವರಿಯಾಗಿ ಅವಶ್ಯಕವಾಗಿರುವ ರೂ. 38.46 ಲಕ್ಷ (ರೂಪಾಯಿ ಮೂವತ್ತೆಂಟು ಲಕ್ಷ ನಲವತ್ತಾರು ಸಾವಿರ ರೂಪಾಯಿಗಳು ಮಾತ್ರ)ಗಳನ್ನು ಹಾಗೂ 1807 ಜಿಲ್ಲಾವಾರು ಅಡುಗೆ ಕೇಂದ್ರಗಳಲ್ಲಿ ಪ್ರಾಥಮಿಕ ಅಡುಗೆ ಕೇಂದ್ರಗಳಿಗೆ ತಲಾ ರೂ. 5000ದಂತೆ ಪ್ರೌಢಶಾಲಾ ಅಡುಗೆ ಕೇಂದ್ರಗಳಿಗೆ ತಲಾ ರೂ. 8000ದಂತೆ ಪಾತ್ರೆ ಪರಿಕರಗಳ ಖರೀದಿಗಾಗಿ ರೂ. 107.99 ಲಕ್ಷಗಳನ್ನು ಅನುಬಂಧದಲ್ಲಿರುವಂತೆ ಮರುಹಂಚಿಕೆ ಮಾಡಿ ನಿಗದಿಪಡಿಸಿರುವ ಅನುದಾನವನ್ನು ಬಿಡುಗಡೆ ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ದಿನಾಂಕ: 22.12.2008, ಸಂಖ್ಯೆ: ಆಇ 1155 ಎಫ್‌ಆರ್‌ಸಿ 2008ರ ಪತ್ರದಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಐ.ಎಫ್. ಮಾಗಿ**

ವಿಶೇಷಾಧಿಕಾರಿಗಳು ಮತ್ತು ಪದನಿಮಿತ್ತ, ಸರ್ಕಾರದ ಅಧೀನ ಕಾರ್ಯದರ್ಶಿಗಳು ಶಿಕ್ಷಣ ಇಲಾಖೆ (ಯೋಜನೆ).

**Procurement of Kitchen Devices during 2008-09 in Primary & High Schools under MME**

| Sl. No. | Districts | No. of schools requiring Kitchen Devices | No. of schools for which Kitchen Devices sanctioned during 2006-07, 2007-08 & 2008-09 | Balance requirement of Kitchen vessels | | | Amount in Lakhs | | | Evaluation of MDM by External Agency | Total Amount |
|---|---|---|---|---|---|---|---|---|---|---|---|
| | | | | Primary School | High School | Total | For Primary @ Rs.5000/ Kitchen Centre | For High School @ Rs 8000/ Kitchen Centre | Total | | |
| 1. | Bagalkote | 1178 | 952 | 40 | 20 | 60 | 2.00 | 1.60 | 3.60 | | 42.06 |
| 2. | Bangalore (R) | 1182 | 1077 | 0 | 22 | 22 | 0.00 | 1.76 | 1.76 | | 1.76 |
| 3. | Bangalore (U) | 432 | 345 | 0 | 0 | 0 | 0.00 | 0.00 | 0.00 | | 0.00 |
| 4. | Belgaum | 2405 | 2030 | 30 | 0 | 30 | 1.50 | 0.00 | 1.50 | | 1.50 |
| 5. | Bellary | 1235 | 1179 | 0 | 0 | 0 | 0.00 | 0.00 | 0.00 | | 0.00 |
| 6. | Bidar | 1051 | 899 | 20 | 20 | 40 | 1.00 | 1.60 | 2.60 | | 2.60 |
| 7. | Bijapur | 1666 | 1204 | 104 | 25 | 129 | 5.20 | 2.00 | 7.20 | | 7.20 |
| 8. | Chamarajanagar | 784 | 685 | 0 | 20 | 20 | 0.00 | 1.60 | 1.60 | | 1.60 |
| 9. | Chikkaballapur | 1609 | 1511 | 15 | 0 | 15 | 0.75 | 0.00 | 0.75 | | 0.75 |
| 10. | Chikkamagalur | 1508 | 1007 | 85 | 15 | 100 | 4.25 | 1.20 | 5.45 | | 5.45 |
| 11. | Chitradurga | 1434 | 913 | 85 | 15 | 100 | 4.25 | 1.20 | 5.45 | | 5.45 |
| 12. | Dharwad | 0 | 0 | 0 | 0 | 0 | 0.00 | 0.00 | 0.00 | | 0.00 |
| 13. | Davangere | 1414 | 966 | 65 | 25 | 90 | 3.25 | 2.00 | 5.25 | | 5.25 |
| 14. | Gadag | 590 | 514 | 0 | 20 | 20 | 0.00 | 1.60 | 1.60 | | 1.60 |
| 15. | Gulbarga | 2653 | 1958 | 0 | 110 | 110 | 0.00 | 8.80 | 8.80 | 38.46 | 8.80 |
| 16. | Hassan | 2639 | 2485 | 0 | 30 | 30 | 0.00 | 2.40 | 2.40 | | 2.40 |
| 17. | Haveri | 1092 | 934 | 20 | 20 | 40 | 1.00 | 1.60 | 2.60 | | 2.60 |
| 18. | Kodagu | 447 | 407 | 0 | 0 | 0 | 0.00 | 0.00 | 0.00 | | 0.00 |
| 19. | Kolar | 1817 | 1511 | 40 | 0 | 40 | 2.00 | 0.00 | 2.00 | | 2.00 |
| 20. | Koppal | 1021 | 797 | 20 | 40 | 60 | 1.00 | 3.20 | 4.20 | | 4.20 |
| 21. | Mandya | 1907 | 1045 | 140 | 20 | 160 | 7.00 | 1.60 | 8.60 | | 8.60 |
| 22. | Mangalore (DK) | 1264 | 895 | 35 | 50 | 85 | 1.75 | 4.00 | 5.75 | | 5.75 |
| 23. | Mysore | 2013 | 1600 | 65 | 20 | 85 | 3.25 | 1.60 | 4.85 | | 4.85 |
| 24. | Raichur | 1446 | 1134 | 35 | 50 | 85 | 1.75 | 4.00 | 5.75 | | 5.75 |
| 25. | Ramnagar | 1349 | 573 | 130 | 0 | 130 | 6.50 | 0.00 | 6.50 | | 6.50 |
| 26. | Shimoga | 2024 | 1040 | 130 | 16 | 146 | 6.50 | 1.28 | 7.78 | | 7.78 |
| 27. | Tumkur | 3541 | 2270 | 160 | 30 | 190 | 8.00 | 2.40 | 10.40 | | 10.40 |
| 28. | Udupi | 748 | 613 | 0 | 20 | 20 | 0.00 | 1.60 | 1.60 | | 1.60 |
| 29. | Uttara Kannada | 2139 | 2078 | 0 | 0 | 0 | 0.00 | 0.00 | 0.00 | | 0.00 |
| | **TOTAL** | **42588** | **32622** | **1219** | **588** | **1807** | **60.95** | **47.04** | **107.99** | **38.46** | **146.45** |

P.R. 1183

Joint Director (MMS)

**ಇಂಧನ ಸಚಿವಾಲಯ**

**ವಿಷಯ:** ಮೆ:: ಎಸ್‌ಆರ್‌ಎಂ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಚಿಕ್ಕಮಗಳೂರು ಜಿಲ್ಲೆಯ ಮೂಡಿಗೆರೆ ತಾಲ್ಲೂಕಿನ ಸೋಮಾವತಿ ಹೊಳೆಗೆ ಅಡ್ಡಲಾಗಿ ಹಂಚಿಕೆಯಾಗಿರುವ 6.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನಗೊಳಿಸಲು ಕಾಲಾವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಇಂಇ 52 ಎನ್‌ಸಿಇ 2004 ದಿನಾಂಕ: 13.2.2004.
2. ಸರ್ಕಾರಿ ಆದೇಶ ಸಂಖ್ಯೆ: ಇಂಇ 52 ಎನ್‌ಸಿಇ 2004 ದಿನಾಂಕ: 4.11.2004.
3. ಸರ್ಕಾರಿ ಆದೇಶ ಸಂಖ್ಯೆ: ಇಎನ್ 128 ಎನ್‌ಸಿಇ 2008 ದಿನಾಂಕ: 3.5.2008.
4. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ:ಕೆಆರ್‌ಇಡಿಎಲ್/06/ಸೋಮಾವತಿ/09/1092 ದಿನಾಂಕ: 9.2.2009/2.3.2009.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಮೆ:: ಎಸ್‌ಆರ್‌ಎಂ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರಿಗೆ ಚಿಕ್ಕಮಗಳೂರು ಜಿಲ್ಲೆಯ ಮೂಡಿಗೆರೆ ತಾಲ್ಲೂಕಿನ ಸೋಮಾವತಿ ಹೊಳೆಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಆದೇಶದಲ್ಲಿ ಸದರಿ ಯೋಜನೆಯ ಸಾಮರ್ಥ್ಯವನ್ನು 2.00 ಮೆಗಾ ವ್ಯಾಟ್‌ನಿಂದ 6.00 ಮೆಗಾ ವ್ಯಾಟ್‌ಗೆ ಹೆಚ್ಚಿಸಿ ಯೋಜನೆಯ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿದೆ.

ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ದಿನಾಂಕ: 3.5.2008 ರ ಆದೇಶದಲ್ಲಿ ಸದರಿ ಯೋಜನೆಯನ್ನು ಅನುಷ್ಠಾನ ಮಾಡಲು ಕಾಲಾವಧಿಯನ್ನು ಸದರಿ ಆದೇಶ ಹೊರಡಿಸಿದ ದಿನಾಂಕದಿಂದ 31.12.2008 ರವರೆಗೆ ವಿಸ್ತರಿಸಲಾಗಿದೆ.

ಸದರಿ ಅಭಿವೃದ್ಧಿದಾರರು ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ಸಾಕಷ್ಟು ಪ್ರಗತಿಯನ್ನು ಸಾಧಿಸಿರುವುದರಿಂದ, ಸದರಿಯವರ ಕೋರಿಕೆಯಂತೆ ಸೋಮಾವತಿ ಕಿರು ಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನಗೊಳಿಸಲು ಕಾಲಾವಧಿಯನ್ನು ದಿನಾಂಕ: 30.06.2009 ರವರೆಗೆ ವಿಸ್ತರಿಸಲು ಪರಿಗಣಿಸಬಹುದಾಗಿದೆಂದು ಮೇಲೆ ಕ್ರಮ ಸಂಖ್ಯೆ (4) ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಸರ್ಕಾರಕ್ಕೆ ಶಿಫಾರಸ್ಸು ಮಾಡಿ, ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 193 ಎನ್‌ಸಿಇ 2009, ಬೆಂಗಳೂರು, ದಿನಾಂಕ: 25ನೇ ಏಪ್ರಿಲ್ 2009**

ಮೆ:: ಎಸ್‌ಆರ್‌ಎಂ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಚಿಕ್ಕಮಗಳೂರು ಜಿಲ್ಲಯ ಮೂಡಿಗೆರೆ ತಾಲ್ಲೂಕಿನ ಸೋಮಾವತಿ ಹೊಳೆಗೆ ಅಡ್ಡಲಾಗಿ ಹಂಚಿಕೆಯಾಗಿರುವ 6.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನ ಮಾಡಲು ಕಾಲಾವಧಿಯನ್ನು ದಿನಾಂಕ: 30.06.2009 ರವರೆಗೆ ವಿಸ್ತರಿಸಲಾಗಿದೆ.

ಸದರಿ ಆದೇಶವನ್ನು ರದ್ದುಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಹಂಚಿಕೆ ಆದೇಶದ ಇತರೆ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1184 **ಎಸ್.ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ವಿಷಯ:** ಕರ್ನಾಟಕ ವಿದ್ಯುತ್ ನಿಗಮ ನಿಯಮಿತವು ಜಾರಿಗೊಳಿಸಿದ್ದ ಸ್ವ–ಇಚ್ಛಾ ನಿರ್ಗಮನ ಯೋಜನೆಗೆ ಘಟನೋತ್ತರ ಅನುಮೋದನೆ ನೀಡುವ ಕುರಿತು.

**ಓದಲಾಗಿದೆ:**
1. ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಅಧಿಕೃತ ಜ್ಞಾಪನ ಸಂಖ್ಯೆ:ಎ1ಪಿ1ಎ ದಿನಾಂಕ: 8.3.2001 ಹಾಗೂ 21.2.2004.
2. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಇವರ ಪತ್ರ ಸಂಖ್ಯೆ: ಎ1ಪಿ1ಎ/3486 ದಿನಾಂಕ: 8.8.2008.

**ಪ್ರಸ್ತಾವನೆ:**

ಕರ್ನಾಟಕ ವಿದ್ಯುತ್ ನಿಗಮ ನಿಯಮಿತವು ಮೇಲೆ ಕ್ರಮಾಂಕ (1)ರಲ್ಲಿ ಓದಲಾದ ಅಧಿಕೃತ ಜ್ಞಾಪನಗಳಲ್ಲಿ ಸ್ವ–ಇಚ್ಛಾ ನಿರ್ಗಮನ ಯೋಜನೆಯನ್ನು ಜಾರಿಗೆ ತಂದಿತ್ತು. ಸದರಿ ಯೋಜನೆಯಡಿಯಲ್ಲಿ ನಿರ್ಗಮನವನ್ನು ಪಡೆಯಲು ಬಯಸುವ ಉದ್ಯೋಗಿಗಳು ಈ ಕೆಳಗಿನ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಾರೆಂದು ಸೂಚಿಸಿತ್ತು:–

ಅ) ಈ ಕೆಳಗಿನ ಮೊತ್ತಕ್ಕೆ ಸಮನಾದ ಅನುಗ್ರಹ ಕೊಡುಗೆ:

1. ಸಂಪೂರ್ಣಗೊಳಿಸಿದ ಪ್ರತಿ ವರ್ಷದ ಸೇವೆಗೆ ಎರಡು ತಿಂಗಳ ವೇತನ

ಅಥವಾ

2. ವಯೋನಿವೃತ್ತಿ ಹೊಂದಲು ಬಾಕಿ ಇರುವ ತಿಂಗಳುಗಳಿಗೆ ಹಾಲಿ ಪಡೆಯುತ್ತಿರುವ ವೇತನದಿಂದ ಗುಣಿಸಿದ ಮೊತ್ತ

ಅಥವಾ

3. ರೂಪಾಯಿ 6.00 ಲಕ್ಷ (ರೂಪಾಯಿ ಆರು ಲಕ್ಷ) ಇವುಗಳಲ್ಲಿ ಯಾವುದು ಕಡಿಮೆಯೋ ಅದು.

ಆ) ಈ ಅನುಗ್ರಹ ಕೊಡುಗೆಯು ಉದ್ಯೋಗಿಯು ನಿವೃತ್ತಿಯಾದಾಗ ಸಿಗಬಹುದಾದ ಸೌಲಭ್ಯಗಳಾದ ಪಿಂಚಣಿ/ ಸಿ.ಪಿ.ಎಫ್, ರಜೆ ನಗದೀಕರಣ ಮುಂತಾದವುಗಳ ಜೊತೆಗೆ ಕೊಡಲಾಗುವ ಮೊತ್ತವಾಗಿರುವುದು.

ಪ್ರಧಾನ ಮಹಾಲೇಖಪಾಲರು (C&CA) ದಿನಾಂಕ ದಿನಾಂಕ:02.07.2007 ಹಾಗೂ 13.2.2008 ರ ಪತ್ರಗಳಲ್ಲಿ ವೈದ್ಯಕೀಯವಾಗಿ ಅನರ್ಹರಾದ ಉದ್ಯೋಗಿಗಳಿಗೆ ಒಂದು ಹೊಸ ಸ್ವಯಂ ನಿರ್ಗಮನ ಯೋಜನೆಯನ್ನು ಕರ್ನಾಟಕ ವಿದ್ಯುತ್ ನಿಗಮ ನಿಯಮಿತವು ಪ್ರಾರಂಭಿಸಿ, ಆ ಉದ್ಯೋಗಿಗಳಿಗೆ ನೀಡಿದ ಅನುಗ್ರಹ ಕೊಡುಗೆಯ ಪಾವತಿಯಿಂದಾಗಿ ರೂ. 46.89 ಕೋಟಿ ತಪ್ಪಿಸಬಹುದಾದ ವೆಚ್ಚವು ಪರಿಣಮಿಸಿತು ಎಂದು ಹಾಗೂ ಕರ್ನಾಟಕ ರಾಜ್ಯದ ಸಾರ್ವಜನಿಕ ಉದ್ದಿಮೆಗಳ ಉದ್ಯೋಗಿಗಳಿಗಾಗಿ ಕರ್ನಾಟಕ ಸಾರ್ವಜನಿಕ ಉದ್ದಿಮೆಗಳ ಇಲಾಖೆಯು (ಆಗಸ್ಟ್ 2001ರಲ್ಲಿ) ಹೊರಡಿಸಿರುವ ಸರ್ಕಾರಿ ಆದೇಶದಲ್ಲಿ ಅನುಗ್ರಹ ಕೊಡುಗೆಯನ್ನು ರೂ. 5.00 ಲಕ್ಷಗಳಿಗೆ ಸೀಮಿತಗೊಳಿಸಿದೆ. ಆದರೆ ಕರ್ನಾಟಕ ವಿದ್ಯುತ್ ನಿಗಮ ನಿಯಮಿತವು ಹೊರಡಿಸಿರುವ ಸ್ವ–ಇಚ್ಛಾ ನಿರ್ಗಮನ ಮಾರ್ಗಸೂಚಿಯಲ್ಲಿ ರಾಜ್ಯ ಸರ್ಕಾರವು ಸೀಮಿತಗೊಳಿಸಿದ ಮಿತಿಗಿಂತ ಹೆಚ್ಚಿನ ಅನುಗ್ರಹ ಕೊಡುಗೆಯನ್ನು ನಿಗಧಿಪಡಿಸಿ ನೀಡಿರುವುದರ ಬಗ್ಗೆ ಆಕ್ಷೇಪಣೆಗಳನ್ನು ವ್ಯಕ್ತಪಡಿಸಿರುತ್ತಾರೆ.

ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ರವರು ಮೇಲೆ ಕ್ರಮಾಂಕ (2) ರಲ್ಲಿ ಓದಲಾದ ಪತ್ರದಲ್ಲಿ ಸ್ವ–ಇಚ್ಛಾ ನಿರ್ಗಮನ ಯೋಜನೆಯನ್ನು ಕಾರ್ಯಗತಗೊಳಿಸಿದ ಸನ್ನಿವೇಶವನ್ನು ವಿವರಿಸುತ್ತಾ, ಈವರೆಗೆ ಒಟ್ಟು 1554 ಉದ್ಯೋಗಿಗಳು ಸದರಿ ಯೋಜನೆಗಳಡಿ ನಿರ್ಗಮಿಸಿದ್ದು, ನಿವೃತ್ತೋತ್ತರ ಸೌಲಭ್ಯಗಳ ಹೊರತಾಗಿ ರೂ. 81.53 ಕೋಟಿ ಮೊತ್ತವನ್ನು ಅನುಗ್ರಹ ಕೊಡುಗೆ ಎಂದು ನೀಡಲಾಗಿದ್ದು, ಈ ಯೋಜನೆಯಡಿ ನಿರ್ಗಮನ ಸೌಲಭ್ಯ ಪಡೆದ ಉದ್ಯೋಗಿಗಳಿಗೆ ನೀಡಲಾದ ಪರಿಹಾರ ಮತ್ತು ಇತರೆ ಸೌಲಭ್ಯಗಳ ಒಟ್ಟಾರೆ ವೆಚ್ಚವನ್ನು ನಿಗಮವೇ ಸಂಪೂರ್ಣವಾಗಿ ಭರಿಸಿರುತ್ತದೆ ಎಂದೂ, ಈ ಯೋಜನೆಯಡಿ ಸ್ವಯಂ ನಿರ್ಗಮನ ಹೊಂದಿದವರಲ್ಲಿ 50ಕ್ಕೂ ಹೆಚ್ಚು ಉದ್ಯೋಗಿಗಳು ನಿವೃತ್ತಿ ನಂತರ ಮರಣ ಹೊಂದಿರುತ್ತಾರೆ. ಇವರು ಸೇವೆಯಲ್ಲಿರುವಾಗಲೇ ಮರಣ ಹೊಂದಿದ್ದಲ್ಲಿ ನಿಗಮವು ಅನುಕಂಪ ನೇಮಕಾತಿಯ ಹೊರೆಯನ್ನು ಭರಿಸಿ, ಅದರಿಂದ ಕಾರ್ಯಬಲದ ವೃದ್ಧಿಗೆ ಕಾರಣವಾಗುತ್ತಿತ್ತು. ಈ ಉದ್ಯೋಗಿಗಳಿಗೆ ವೇತನ, ರಜೆ ಸಂಬಳ, ವೈದ್ಯಕೀಯ, ಶೈಕ್ಷಣಿಕ, ವಸತಿ, ಸಾರಿಗೆ ಹಾಗೂ ಇತರೆ ಮೂಲ ಸೌಕರ್ಯ/ಸೌಲಭ್ಯಗಳನ್ನು ಒದಗಿಸುವ ಭಾಗದಲ್ಲಿ ಗಮನಾರ್ಹ ಇಳಿಕೆಯಾಗಿರುವುದು ನಿಗಮಕ್ಕೆ ಅಪ್ರತ್ಯಕ್ಷ ಲಾಭವಾಗಿರುವುದೆಂದು ತಿಳಿಸುತ್ತಾ, ಈಗಾಗಲೇ ಜಾರಿಗೊಳಿಸಲಾಗಿರುವ ಸ್ವ–ಇಚ್ಛಾ ನಿರ್ಗಮನ ಯೋಜನೆಗೆ ಸರ್ಕಾರದ ಅನುಸಮರ್ಥನೆಯನ್ನು ನೀಡುವಂತೆ ಕೋರಿರುತ್ತಾರೆ.

ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ವಿದ್ಯುತ್ ನಿಗಮ ನಿಯಮಿತರವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಲಾಗಿದೆ:–

**ಸರ್ಕಾರ ಆದೇಶ ಸಂಖ್ಯೆ: ಇಎನ್ 110 ಪಿಪಿಸಿ 2008, ಬೆಂಗಳೂರು, ದಿನಾಂಕ: 25ನೇ ಏಪ್ರಿಲ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ವಾಸ್ತವಾಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ವಿದ್ಯುತ್ ನಿಗಮ ನಿಯಮಮಿತವು ಜಾರಿಗೊಳಿಸಿದ್ದ ಸ್ವ–ಇಚ್ಛಾ ನಿರ್ಗಮನ ಯೋಜನೆಯನ್ನು ಸಂಸ್ಥೆಯ ಹಿತದೃಷ್ಟಿಯಿಂದ ಕಾರ್ಯಗತಗೊಳಿಸಿದ ಸನ್ನಿವೇಶವನ್ನು ಗಣನೆಗೆ ತೆಗೆದುಕೊಂಡು ಹಾಗೂ ಇನ್ನು ಮುಂದೆ ಯಾವುದೇ ಕಾರಣಕ್ಕೂ ಇಂಥಹ ಸನ್ನಿವೇಶಗಳಿಗೆ ಅವಕಾಶ ನೀಡಬಾರದೆಂಬ ಷರತ್ತಿಗೊಳಪಟ್ಟು ಇದೊಂದು ವಿಶೇಷ ಪ್ರಕರಣವೆಂದು ಪರಿಗಣಿಸಿ ಒಂದು ಬಾರಿಯ ಕ್ರಮವಾಗಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತವು ತೆಗೆದುಕೊಂಡಿರುವ ನಿರ್ಣಯಕ್ಕೆ ಸರ್ಕಾರದ ಘಟನೋತ್ತರ ಅನುಮೋದನೆಯನ್ನು ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1185

**ಎಸ್.ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ವಿಷಯ:** ಮೆ: ಡಿಪ್‌ಕಿಟ್ ಎಲೆಕ್ಟ್ರಿಕ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಯ 3.5 ಮೆಗಾ ವ್ಯಾಟ್ ಸಾಮರ್ಥ್ಯದ ಆನೆಬಿದ್ದಹಳ್ಳ ಕಿರು ಜಲ ವಿದ್ಯುತ್ ಯೋಜನೆಯನ್ನು ರದ್ದು ಮಾಡಿರುವ ಬಗ್ಗೆ ಘನ ಉಚ್ಚ ನ್ಯಾಯಾಲಯದ ಆದೇಶದ ಮೇಲೆ ಕ್ರಮ ಕೈಗೊಳ್ಳುವ ಕುರಿತು.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಇಎನ್ 43 ಎನ್‌ಸಿಇ 2007 ದಿನಾಂಕ: 13.4.2007.

2. ಮೆ:: ಡಿಪ್ ಕಿಟ್ ಎಲೆಕ್ಟ್ರಿಕ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರು ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ಸಲ್ಲಿಸಿದ್ದ ರಿಟ್ ಅರ್ಜಿ ಸಂಖ್ಯೆ: 7310/2007.
3. ಘನ ಉಚ್ಚ ನ್ಯಾಯಾಲಯದ ಆದೇಶ ದಿನಾಂಕ: 30.10.2008.
4. ದಿನಾಂಕ: 13.1.2009 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.
5. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ಪತ್ರ ಸಂಖ್ಯೆ: ಕೆಆರ್ಇಡಿ/06/ ಹಂಚಿಕೆ ಸಮಿತಿ ಸಭೆ/09/851 ದಿನಾಂಕ:11/12.2.2009.
6. ಸರ್ಕಾರಿ ಪತ್ರ ಸಂಖ್ಯೆ: ಇಎನ್ 190 ಎನ್‌ಸಿಇ 2007 ದಿನಾಂಕ: 21.2.2009.
7. ಮೆ:: ಡಿಪ್ ಕಿಟ್ ಕಂಪನಿಯವರ ಪತ್ರ ಸಂಖ್ಯೆ: ಎಬಿ ಹಳ್ಳಿ/ಡಿಇಪಿಎಲ್/08 ದಿನಾಂಕ: 4.3.2009.
8. ಸರ್ಕಾರಿ ಪತ್ರ ಸಂಖ್ಯೆ: ಇಎನ್ 190 ಎನ್‌ಸಿಇ 2007 ದಿನಾಂಕ: 13.3.2009.
9. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ಪತ್ರ ಸಂಖ್ಯೆ: ಕೆಆರ್ಇಡಿ/06/ ಆನೆಬಿದ್ದಹಳ್ಳ/ಎಂಹೆಚ್ಎಸ್/09/1325 ದಿನಾಂಕ: 21.3.2009.

**ಪ್ರಸ್ತಾವನೆ:**

ಮೆ:: ಡಿಪ್‌ಕಿಟ್ ಲಿಮಿಟೆಡ್ ಕಂಪನಿಗೆ ಚಿಕ್ಕಮಗಳೂರು ಜಿಲ್ಲೆಯ ಅಳ್ಳೂರಿ ಗ್ರಾಮದ ಬಳಿ ಆನೆಬಿದ್ದಹಳ್ಳ ನಾಲೆಗೆ ಅಡ್ಡಲಾಗಿ 3.5 ಮೆ.ವ್ಯಾ. ಸಾಮರ್ಥ್ಯದ ಆನೆಬಿದ್ದಹಳ್ಳ ಕಿರುಜಲ ವಿದ್ಯುತ್ ಯೋಜನೆಯನ್ನು ಸರ್ಕಾರಿ ಆದೇಶ ಸಂಖ್ಯೆ:ಡಿಇ 19 ಎನ್‌ಸಿಇ 2002, ದಿನಾಂಕ: 22.05.2002ರಲ್ಲಿ ಹಂಚಿಕೆ ಮಾಡಲಾಗಿತ್ತು.

ಸರ್ಕಾರಿ ಆದೇಶ ಸಂಖ್ಯೆ:ಇಂಇ 19 ಎನ್‌ಸಿಇ 2002, ದಿನಾಂಕ:28.04.2003ರಲ್ಲಿ ಸದರಿ ಕಂಪನಿಗೆ ಹಂಚಿಕೆ ಮಾಡಿದ್ದ 3.5 ಮೆ.ವ್ಯಾ ಸಾಮರ್ಥ್ಯದ ಕಿರುಜಲ ವಿದ್ಯುತ್ ಯೋಜನೆಯನ್ನು ಮೆ: ಡಿಪ್‌ಕಿಟ್ ಎಲೆಕ್ಟ್ರಿಕ್ಸ್ ಲಿಮಿಟೆಡ್ ಕಂಪನಿಗೆ ವರ್ಗಾವಣೆ ಮಾಡಲಾಗಿತ್ತು.

ಕಿರುಜಲ ವಿದ್ಯುತ್ ಯೋಜನೆಗಳು ಹಂಚಿಕೆಯಾಗಿ ಬಹಳ ದಿನಗಳಾದರೂ ಯಾವುದೇ ಪ್ರಗತಿಯನ್ನು ಸಾಧಿಸದೇ ಇರುವ ಕುರಿತಾಗಿ, ಎಲ್ಲಾ ಯೋಜನೆಗಳ ಕುರಿತು ಸಮೀಕ್ಷಿಸಿ, ಅವುಗಳಲ್ಲಿ ಒಟ್ಟಾರೆ ಯಾವುದೇ ಪ್ರಗತಿಯನ್ನು ಸಾಧಿಸದೇ ಇರುವ ಯೋಜನೆಗಳನ್ನು ಗುರುತಿಸಿ, ಸದರಿ ಕಿರುಜಲ ವಿದ್ಯುತ್ ಯೋಜನೆಗಳ ಪ್ರಗತಿಯು ಕುಂಠಿತವಾಗಿದ್ದು, ಈ ಕುರಿತಾಗಿ ಅಭಿವೃದ್ಧಿದಾರರು ಯಾವುದೇ ಮಾಹಿತಿಯನ್ನು ನೀಡಿಲ್ಲವೆಂದೂ ಅಲ್ಲದೆ, ಈ ಯೋಜನೆಗಳಿಗೆ ಸಾಕಷ್ಟು ಕಾಲಾವಧಿ ನೀಡಲಾಗಿದ್ದು ಅಪೇಕ್ಷಿತ ಪ್ರಗತಿಯನ್ನು ಸಾಧಿಸಿಲ್ಲವೆಂದು ಸಕಾರಣವಿಲ್ಲದೆ ವಿಳಂಬವಾಗಿರುವ ಅಂತಹ ಯೋಜನೆಗಳ ಪಟ್ಟಿಯನ್ನು ಸರ್ಕಾರಕ್ಕೆ ಕಳುಹಿಸುತ್ತಾ, ಅಂತಹ ಯೋಜನೆಗಳ ಅಭಿವೃದ್ಧಿದಾರರಿಗೆ ಸರ್ಕಾರವು ಕಾರಣ ಕೇಳುವ ನೋಟೀಸು ನೀಡಿ ಯೋಜನೆಗಳನ್ನು ರದ್ದುಗೊಳಿಸಬೇಕೆಂದು ವ್ಯವಸ್ಥಾಪಕ ನಿರ್ದೇಶಕರು, ಕೆ.ಆರ್.ಡಿ.ಎಲ್.ರವರು ದಿನಾಂಕ: 28.12.2006ರ ತಮ್ಮ ಪತ್ರದಲ್ಲಿ ಶಿಫಾರಸ್ಸು ಮಾಡಿದ್ದರು.

ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಇವರು ಕಳುಹಿಸಿದ್ದ ಪಟ್ಟಿಯಲ್ಲಿ (ಕ್ರಮ ಸಂಖ್ಯೆ:7) ಮೆ: ಡಿಪ್‌ಕಿಟ್ ಎಲೆಕ್ಟ್ರಿಕ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಯು ಒಂದಾಗಿತ್ತು. ಆದ್ದರಿಂದ, ಸದರಿ ಕಂಪನಿಗೆ ದಿನಾಂಕ:10.01.2007ರಂದು ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಿ, ಸದರಿಯವರಿಗೆ ಯೋಜನೆ ಹಂಚಿಕೆ ಆದೇಶದಲ್ಲಿ, ಸದರಿ ಯೋಜನೆಯನ್ನು ಗರಿಷ್ಠ 3 ವರ್ಷಗಳ ಕಾಲಾವಧಿಯೊಳಗೆ ಪ್ರಾರಂಭಿಸಬೇಕೆಂಬ ಷರತ್ತನ್ನು ವಿಧಿಸಲಾಗಿದ್ದು, ಸದರಿ ಯೋಜನೆಯ ಅನುಷ್ಠಾನಕ್ಕೆ ಸಾಕಷ್ಟು ಕಾಲಾವಧಿಯನ್ನು ನೀಡಿದ್ದರೂ ಸಹ ಇದುವರೆವಿಗೂ ಯೋಜನೆಯ ಅಪೇಕ್ಷಿತ ಪ್ರಗತಿಯನ್ನು ಸಾಧಿಸಿರುವುದಿಲ್ಲ. ಆದ್ದರಿಂದ ಸದರಿಯವರಿಗೆ ಹಂಚಿಕೆ ಮಾಡಿರುವ ಯೋಜನೆಯನ್ನು ರದ್ದುಪಡಿಸಿ, ಬೇರೆ ಆಸಕ್ತ ಅಭಿವೃದ್ಧಿದಾರರಿಗೆ ಏಕೆ ಹಂಚಿಕೆ ಮಾಡಬಾರದೆಂಬುದಕ್ಕೆ ಲಿಖಿತ ಉತ್ತರವನ್ನು ನೀಡುವಂತೆ ಕೋರಲಾಗಿತ್ತು.

ಸದರಿ ಕಾರಣ ಕೇಳುವ ನೋಟೀಸಿಗೆ ಮೆ: ಡಿಪ್‌ಕಿಟ್ ಎಲೆಕ್ಟ್ರಿಕ್ಸ್ ಪ್ರೈವೇಟ್ ಲಿಮಿಟೆಡ್‌ರವರು ದಿನಾಂಕ:18.1.2007 ರಂದು ಉತ್ತರ ನೀಡುತ್ತಾ, ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು ವಿಸ್ತರಿಸಲು ಕೋರಿದ್ದರು. ಈ ಪತ್ರವನ್ನು ದಿನಾಂಕ: 26.2.2007 ರಂದು ವ್ಯವಸ್ಥಾಪಕ ನಿರ್ದೇಶಕರು, ಕೆ.ಆರ್.ಇ.ಡಿ.ಎಲ್. ಗೆ ಕಳುಹಿಸಿ, ಕೆ.ಆರ್.ಇ.ಡಿ.ಎಲ್. ನ ಅಭಿಪ್ರಾಯವನ್ನು ಕೋರಲಾಗಿತ್ತು. ಕೆ.ಆರ್.ಇ.ಡಿ.ಎಲ್.ನ ವ್ಯವಸ್ಥಾಪಕ ನಿರ್ದೇಶಕರು ದಿನಾಂಕ: 13/15.03.2007 ಪತ್ರದಲ್ಲಿ, ಪ್ರಸ್ತುತ ಅಭಿವೃದ್ಧಿದಾರರಿಗೆ ಯೋಜನೆಯು ಹಂಚಿಕೆಯಾಗಿ 5 ವರ್ಷಗಳಾಗಿದ್ದು ಇದುವರೆವಿಗೂ ಯಾವುದೇ ಪ್ರಗತಿಯನ್ನು ಸಾಧಿಸಿರುವುದಿಲ್ಲ. ಅಭಿವೃದ್ಧಿದಾರರಿಗೆ ಯೋಜನಾ ಪ್ರಗತಿಯನ್ನು ಕುರಿತು ವಿಚಾರಿಸುತ್ತಾ, ಪತ್ರ ಬರೆದಾಗ Gauging ಮಾಡುತ್ತಿರುವುದಾಗಿ ತಿಳಿಸಿರುತ್ತಾರೆ. Gauging ಮಾಡಲು 5 ವರ್ಷಗಳು ಬೇಕಾಗಿರುವುದಿಲ್ಲ, ಅಭಿವೃದ್ಧಿದಾರರು ವಿಳಂಬಕ್ಕೆ ನೀಡದ ಕಾರಣಗಳು ಸಮಂಜಸವಾಗಿಲ್ಲವೆಂದು ಅಭಿಪ್ರಾಯ ವ್ಯಕ್ತಪಡಿಸಿದ್ದರು.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ, ಅಭಿವೃದ್ದಿದಾರರು ನೀಡಿರುವ ಉತ್ತರ ಹಾಗೂ ವ್ಯವಸ್ಥಾಪಕ ನಿರ್ದೇಶಕರು, ಕೆ.ಆರ್.ಇ.ಡಿ.ಎಲ್.ರವರ ಅಭಿಪ್ರಾಯವನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಮೇಲೆ ಕ್ರಮಾಂಕ (1)ರಲ್ಲಿ ಓದಲಾದ

ಸರ್ಕಾರಿ ಆದೇಶದಲ್ಲಿ, ಮೆ: ಡಿಪ್‌ಕಿಟ್ ಎಲೆಕ್ಟ್ರಿಕ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಚಿಕ್ಕಮಗಳೂರು ಜಿಲ್ಲೆಯ ಅಳ್ಳೂರಿ ಗ್ರಾಮದ ಬಳಿ ಆನೆಬಿದ್ದಹಳ್ಳ ನಾಲೆಗೆ ಅಡ್ಡಲಾಗಿ ಹಂಚಿಕೆ ಮಾಡಿದ್ದ 3.5 ಮೆ.ವ್ಯಾ. ಸಾಮರ್ಥ್ಯದ ಆನೆಬಿದ್ದಹಳ್ಳ ಕಿರುಜಲ ವಿದ್ಯುತ್ ಯೋಜನೆಯ ಹಂಚಿಕೆ ಆದೇಶವನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಲಾಗಿತ್ತು.

ಸದರಿ ರದ್ದತಿ ಆದೇಶದ ವಿರುದ್ಧ ಮೆ:: ಡಿಪ್‌ಕಿಟ್ ಎಲೆಕ್ಟ್ರಿಕ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರು ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ: 7310/2007 ನ್ನು ದಾಖಲಿಸಿ ಈ ಕೆಳಕಂಡ ಅಂಶಗಳ ಕುರಿತು ಕೋರಿಕೆ ಸಲ್ಲಿಸಿದ್ದರು:–

"a) Quashing the order under the original of Annexure 'W' bearing No:EN 43 NCE 2007, dated 13.04.2007 as unsustainable.

b) Further direct the respondents to reconsider the matter and pass appropriate orders on the prayer for extension of time as requested by the petitioner.

c) Further restrain the respondents 1 and 2 from allotting the schedule project to any third persons"

ಸದರಿ ರಿಟ್ ಅರ್ಜಿಯು ದಿನಾಂಕ: 30.10.2008 ರಂದು ಇತ್ಯರ್ಥವಾಗಿದ್ದು, ಘನ ಉಚ್ಚ ನ್ಯಾಯಾಲಯವು ಈ ಕೆಳಕಂಡಂತೆ ಆದೇಶ ನೀಡಿರುತ್ತದೆ:–

"I) The writ petition filed by petitioner is allowed in part;

II) The impugned order dated 13th April 2007 bearing No:EN 43 NCE 2007 on the file of the first respondent vide Annexure W, is hereby set aside.;

III) The matter stands remitted back to first respondent for reconsideration of the matter afresh and to take appropriate decision in accordance with law, after affording reasonable opportunity to petitioner and dispose of the same, as expeditiously as possible, at any rate, **Within a period of four months from the date of receipt of a copy of this order."**

ಘನ ಉಚ್ಚ ನ್ಯಾಯಾಲಯವು ನೀಡಿರುವ ಆದೇಶದ ಹಿನ್ನೆಲೆಯಲ್ಲಿ, ಸದರಿ ವಿಷಯವನ್ನು ದಿನಾಂಕ: 13.01.2009 ರಂದು ನಡೆದ ಹಂಚಿಕೆ ಸಮಿತಿ ಸಭೆಯ ಮುಂದೆ ಮಂಡಿಸಲಾಗಿತ್ತು. ಹಂಚಿಕೆ ಸಮಿತಿ ಸಭೆಯಲ್ಲಿ ಸಮಿತಿಯು ಈ ಕೆಳಕಂಡಂತೆ ತೀರ್ಮಾನ ತೆಗೆದುಕೊಂಡಿರುತ್ತದೆ:–

"However it was decided that a spot inspection should be conducted by KREDL/KPCL/Irrigation Department to determine the following facts:-

i) Whether any site preparation like gauging etc., has in fact been undertaken by the petitioner.

ii) Whether the petitioner is in a state of readiness to commence construction of the project.

iii) Whether project can be completed and commissioned by June 2010.

The inspection should be conducted, by requesting the petitioner to be present during inspection and a report of the inspection prepared and sent by 15.02.2009."

ಹಂಚಿಕೆ ಸಮಿತಿ ನಿರ್ಣಯದಂತೆ, ಶ್ರೀ ಎಂ.ಎಸ್. ಶ್ರೀರಂಗ ಮೂರ್ತಿ, ನಿರ್ದೇಶಕರು, ಜಿಯೋಮ್ಯಾಟಿಕ್ಸ್ ಸೆಂಟರ್, WRDO/SE Hydrology, ಶ್ರೀ ಕೆ.ಎಸ್. ರಾಧಾಕೃಷ್ಣ, ಇ.ಇ., ಕೆ.ಪಿ.ಸಿ.ಎಲ್. ಮತ್ತು ಶ್ರೀ ರಮೇಶ್ ನಗರ್, ಡಿ.ಜಿ.ಎಂ., ಕೆ.ಆರ್.ಇ.ಡಿ.ಎಲ್. ಇವರುಗಳನ್ನೊಳಗೊಂಡ ತಂಡವು ದಿನಾಂಕ:07.02.2009ರಂದು ಸದರಿ ಯೋಜನಾ ಸ್ಥಳವನ್ನು ಪರಿವೀಕ್ಷಣೆ ಮಾಡಿದೆ. ಈ ಸಂದರ್ಭದಲ್ಲಿ ಮೆ: ಡಿಪ್‌ಕಿಟ್ ಎಲೆಕ್ಟ್ರಿಕ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಯ ಬದಲಿ ನಿರ್ದೇಶಕರಾದ ಶ್ರೀ ಎಂ.ಸತ್ಯನಾರಾಯಣರವರು ಹಾಜರಿದ್ದರು. ಪರಿವೀಕ್ಷಣಾ ವರದಿಯಲ್ಲಿ, ಸದರಿ ಯೋಜನಾ ಸ್ಥಳದಲ್ಲಿ flow data study ಇತ್ಯಾದಿ ಕುರಿತಾದ ಯಾವುದೇ ಯೋಜನಾ ಕಾಮಗಾರಿಯನ್ನು ಪ್ರಾರಂಭಿಸಿರುವುದಿಲ್ಲ, ಕಂಪನಿಯ ಪ್ರತಿನಿಧಿಯು ಇನ್ನೂ 2 ವರ್ಷಗಳ ಕಾಲ ನೀರಿನ ಹರಿವನ್ನು ಅಳತೆ ಮಾಡಬೇಕೆಂದು ತಿಳಿಸಿರುತ್ತಾರೆ. ಆದರೆ ಈ ಕುರಿತು ಸ್ಥಳದಲ್ಲಿ ಯಾವುದೇ ಕ್ರಮ ಕೈಗೊಂಡಿರುವುದಿಲ್ಲ, ಕೇವಲ 2003 ಮತ್ತು 2004ರ ವರ್ಷಗಳಲ್ಲಿ ನೀರಿನ ಹರಿವಿನ ಅಳತೆ ಮಾಡಿರುವುದಾಗಿ ತಿಳಿಸುತ್ತಾ, ಜೂನ್ 2011ರವರೆಗೆ ಅನುಷ್ಠಾನಗೊಳಿಸುವುದಕ್ಕೆ ಕಾಲಾವಕಾಶಬೇಕೆಂದು ಹೇಳಿರುತ್ತಾರೆಂದು ಪರಿವೀಕ್ಷಣಾ ತಂಡದವರು ವರದಿ ಮಾಡಿರುತ್ತಾರೆಂದು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತರವರು ಮೇಲೆ ಕ್ರಮಾಂಕ (5)ರಲ್ಲಿ ಓದಲಾದ ಪತ್ರದಲ್ಲಿ ತಿಳಿಸಿರುತ್ತಾರೆ.

ಘನ ಉಚ್ಚ ನ್ಯಾಯಾಲಯವು ನೀಡಿರುವ ತೀರ್ಪಿನ ಹಿನ್ನೆಲೆಯಲ್ಲಿ, ಅಭಿವೃದ್ಧಿದಾರರಿಗೆ ಮತ್ತೊಂದು ಅವಕಾಶವನ್ನು ನೀಡಿ, ಯೋಜನೆ ಹಂಚಿಕೆಯಾದ ದಿನಾಂಕದಿಂದ ಯೋಜನೆ ರದ್ದತಿಯಾದ ದಿನಾಂಕದವರೆಗೆ ಸಾಧಿಸಿದ ಪ್ರಗತಿಯ ಬಗ್ಗೆ ಪೂರಕ ದಾಖಲಾತಿಗಳನ್ನು ನೀಡುವಂತೆ ಮೇಲೆ ಕ್ರಮಾಂಕ (6)ರಲ್ಲಿ ಓದಲಾದ ಪತ್ರದಲ್ಲಿ ತಿಳಿಸಲಾಗಿತ್ತು.

ಮೆ:: ಡಿಪ್ ಕಿಟ್ ಎಲೆಕ್ಟ್ರಿಕ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರು ಮೇಲೆ ಕ್ರಮಾಂಕ (7) ರಲ್ಲಿ ಓದಲಾದ ಪತ್ರದೊಂದಿಗೆ ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ಕೈಗೊಂಡಿರುವ ಕ್ರಮಗಳ ಬಗ್ಗೆ ಈ ಕೆಳಕಂಡ ಮಾಹಿತಿಗಳನ್ನು ನೀಡಿರುತ್ತಾರೆ:–

"We have been keeping informed/appraised the development of the project, difficulties encountered in gauging the water discharge etc from time to time to KREDL under intimation to your office.

However, as desired by you, we have enclosed herewith copies of all these correspondents, data including the chronological sequential development of activities undertaken by us, till date for your information and records,

We now look forward for restoration of the project, at the earliest enabling us to start gauging at site from June 2009, for one year and also to undertake other activities of project for implementation as per schedule given by us to be ready for commissioning by June 2011"

ಅವರು ನೀಡಿದ ಮಾಹಿತಿಯನ್ನು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಇವರಿಗೆ ಕಳುಹಿಸಿ, ಅರ್ಜಿದಾರರ ಕೋರಿಕೆಯನ್ನು ಪರಿಗಣಿಸಲು ಯಾವುದಾದರೂ ಹೊಸ ಕಾರಣಗಳಿವೆಯೇ? ಎಂಬುದನ್ನು ಪರಿಶೀಲಿಸಿ ಅಭಿಪ್ರಾಯವನ್ನು ನೀಡುವಂತೆ ಮೇಲೆ ಕ್ರಮಾಂಕ (8)ರಲ್ಲಿ ಓದಲಾದ ಪತ್ರದಲ್ಲಿ ಕೋರಲಾಗಿತ್ತು.

ಸದರಿ ಯೋಜನಾ ಸ್ಥಳದ ಜಂಟಿ ಪರಿವೀಕ್ಷಣಾ ವರದಿಯನ್ನು ಈಗಾಗಲೇ ಸರ್ಕಾರಕ್ಕೆ ಕಳುಹಿಸಿದ್ದು, ಸದರಿ ವರದಿಯನ್ವಯ, ಕಂಪನಿಯವರು ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ಯಾವುದೇ ಕೆಲಸವನ್ನು ಪ್ರಾರಂಭಿಸಿರುವುದಿಲ್ಲ, ಕೆ.ಆರ್.ಇ.ಡಿಎಲ್.ಗೆ ಡಿ.ಪಿ.ಆರ್.ನ್ನು ಇನ್ನೂ ಸಲ್ಲಿಸಿರುವುದಿಲ್ಲ. ಕೇವಲ 2003 ಮತ್ತು 2004ರ ವರ್ಷಗಳಲ್ಲಿ ನೀರಿನ ಹರಿವಿನ ಅಳತೆ ಮಾಡಿರುವುದಾಗಿ ತಿಳಿಸುತ್ತಾ, ಜೂನ್ 2011ರವರೆಗೆ ಅನುಷ್ಠಾನಗೊಳಿಸುವುದಕ್ಕೆ ಕಾಲಾವಕಾಶ ಕೋರಿರುವುದು ಹೊರತಾಗಿ ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ಯಾವುದೇ ಕೆಲಸವನ್ನು ಮಾಡಿರುವುದಿಲ್ಲವೆಂದೂ, ಕಂಪನಿಯ ಪ್ರತಿನಿಧಿಯು ಇನ್ನೂ 2 ವರ್ಷಗಳ ಕಾಲ ನೀರಿನ ಹರಿವನ್ನು ಅಳತೆ ಮಾಡಬೇಕೆಂದು ತಿಳಿಸಿರುತ್ತಾರೆ. ಈ ಕಾರಣದಿಂದಾಗಿ, ಜೂನ್ 2011ಕ್ಕೆ ಸದರಿ ಯೋಜನೆಯನ್ನು ಪ್ರಾರಂಭಿಸುವುದು ಕಷ್ಟಸಾಧ್ಯ ಎಂದು ತಿಳಿಸುತ್ತಾ, ಅರ್ಜಿದಾರರ ಕೋರಿಕೆಯನ್ನು ಪರಿಗಣಿಸಲು ಯಾವುದೇ ಹೊಸ ಕಾರಣಗಳು ಇಲ್ಲ ಎಂದು ಮೇಲೆ ಕ್ರಮಾಂಕ (9)ರಲ್ಲಿ ಓದಲಾದ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಹುದಾದ ಇಂಧನ ಅಭಿವೃದ್ಧಿ ನಿಯಮಿತರವರು ವರದಿ ಮಾಡಿರುತ್ತಾರೆ.

ಮೆ:: ಡಿಪ್ ಕಿಟ್ ಎಲೆಕ್ಟ್ರಿಕ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರು ಒದಗಿಸಿರುವ ಮಾಹಿತಿ ಹಾಗೂ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಹುದಾದ ಇಂಧನ ಅಭಿವೃದ್ಧಿ ನಿಯಮಿತ ಇವರು ನೀಡಿರುವ ಅಭಿಪ್ರಾಯಗಳನ್ನು ಕೂಲಂಕಷವಾಗಿ ಪರಿಶೀಲಿಸಿದಾಗ, ಅರ್ಜಿದಾರರು ಯೋಜನೆಯನ್ನು ಅನುಷ್ಠಾನಗೊಳಿಸಲು ಅಸಮರ್ಥರಾಗಿರುವುದು ವೇದ್ಯವಾಗುತ್ತದೆ. ಆದ್ದರಿಂದ, ಈ ಕೆಳಕಂಡಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 190 ಎನ್‌ಸಿಇ 2007, ಬೆಂಗಳೂರು, ದಿನಾಂಕ: 21ನೇ ಏಪ್ರಿಲ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಮೆ:: ಡಿಪ್‌ಕಿಟ್ ಎಲೆಕ್ಟ್ರಿಕ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಯು ಚಿಕ್ಕಮಗಳೂರು ಜಿಲ್ಲೆಯ ಆಳ್ದೂರಿ ಗ್ರಾಮದ ಬಳಿ ಆನೆಬಿದ್ದಹಳ್ಳ ನಾಲೆಗೆ ಅಡ್ಡಲಾಗಿ 3.5 ಮೆಗಾ ವ್ಯಾಟ್ ಸಾಮರ್ಥ್ಯದ ಆನೆ ಬಿದ್ದಹಳ್ಳ ಕಿರುಜಲ ವಿದ್ಯುತ್ ಯೋಜನೆಯ ಹಂಚಿಕೆಯನ್ನು ರದ್ದು ಮಾಡಿರುವ ಆದೇಶವನ್ನು ಹಿಂಪಡೆಯಲು ಸಲ್ಲಿಸಿರುವ ಮನವಿಯನ್ನು ಪುನರ್ ಪರಿಶೀಲಿಸಿ, ಅವರ ಕೋರಿಕೆ ಪರಿಗಣಿಸಲು ಯಾವುದೇ ಸಮಂಜಸವಾದ ಕಾರಣಗಳು ಇಲ್ಲದಿರುವುದರಿಂದ, ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1186

**ಎಸ್.ಜಿ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ**

**ವಿಷಯ:** ಪಶ್ಚಿಮ ಘಟ್ಟಗಳ ಅಭಿವೃದ್ಧಿ ಕಾರ್ಯಕ್ರಮದ 2008–09ನೇ ಸಾಲಿನ ಅನುದಾನವನ್ನು ಲೆಕ್ಕಶೀರ್ಷಿಕೆ 2551–01–198–6–02 ರ ಅಡಿ ಪುನರ್ ವಿನಿಯೋಗದ ಮೂಲಕ ಭರಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂ.ಗ್ರಾಅಪ.4.ಡಬ್ಲ್ಯೂಜಿಪಿ.2008 ದಿನಾಂಕ: 16.4.2008.
2. ಯೋಜನಾ ಆಯೋಗ (ಪಶ್ಚಿಮ ಘಟ್ಟಗಳ ಸಚಿವಾಲಯ), ಭಾರತ ಸರ್ಕಾರ, ನವದೆಹಲಿ ರವರ ಪತ್ರ ಸಂ. ಪಿಸಿ(ಪಿ) 19/125/ಕೆಎಆರ್/2008–ಡಬ್ಲ್ಯೂಜಿಎಸ್ ದಿನಾಂಕ:26.08.2008.
3. ಯೋಜನಾ ಆಯೋಗ (ಪಶ್ಚಿಮ ಘಟ್ಟಗಳ ಸಚಿವಾಲಯ), ಭಾರತ ಸರ್ಕಾರ, ನವದೆಹಲಿ ರವರ ಆದೇಶ ಸಂ.ಪಿಸಿ(ಪಿ)19/320/ಎಸ್‌ಸಿಎ/2008–ಡಬ್ಲ್ಯೂಜಿಎಸ್ ದಿನಾಂಕ:2.3.2009.
4. ಹಣಕಾಸು ಮಂತ್ರಾಲಯ, ಭಾರತ ಸರ್ಕಾರ, ನವದೆಹಲಿ ಇವರ ಆದೇಶ ಸಂ.ಎಫ್.ನಂ.44(6) ಪಿಎಫ್1/2008–564 ದಿನಾಂಕ:12.3.2009.
5. ಆರ್ಥಿಕ ಇಲಾಖೆಯ ಜಮಾ ಧೃಢೀಕರಣ ಪತ್ರ ಸಂ.ಆಇ:279:ಎಫ್‌ಆರ್‌ಸಿ: 2009 ದಿನಾಂಕ: 19.03.2009.

**ಪ್ರಸ್ತಾವನೆ:**

ಕೇಂದ್ರ ಯೋಜನಾ ಆಯೋಗವು ಮೇಲೆ ಓದಲಾದ ಆದೇಶ (2)ರಲ್ಲಿ ಪಶ್ಚಿಮ ಘಟ್ಟಗಳ ಅಭಿವೃದ್ಧಿ ಕಾರ್ಯಕ್ರಮದ ಅಡಿ 2008–09ನೇ ಸಾಲಿನ ವಿಶೇಷ ಯೋಜನೆಗಳ ಬಾಬ್ತು ಚಿಕ್ಕಮಗಳೂರು ಜಿಲ್ಲೆಗೆ ರೂ.75.00 ಲಕ್ಷ ಹಾಗೂ ಹಾಸನ ಜಿಲ್ಲೆಗೆ ರೂ.32.335 ಲಕ್ಷ ಅನುದಾನ ಬಳಸಲು ಮಂಜೂರಾತಿ ನೀಡಿರುತ್ತದೆ. ಮೇಲೆ ಓದಲಾದ ಆದೇಶ (3) ಹಾಗೂ (4)ರ ಅನ್ವಯ ಭಾರತ ಸರ್ಕಾರವು ಈ ಕಾರ್ಯಕ್ರಮದ ಅನುಷ್ಠಾನಕ್ಕಾಗಿ ಪ್ರಸಕ್ತ ಸಾಲಿನ ಎರಡನೇ ಕಂತಿನ ವಿಶೇಷ ಕೇಂದ್ರ ಅನುದಾನದ ನಿಧಿ ಭಾಗದ ಮೊತ್ತವಾಗಿ ರೂ.657.90 ಲಕ್ಷ ಅನುದಾನವನ್ನು ರಾಜ್ಯಕ್ಕೆ ಬಿಡುಗಡೆ ಮಾಡಿರುತ್ತದೆ. ಈ ಕಾರ್ಯಕ್ರಮದ ಅನುಷ್ಠಾನಕ್ಕಾಗಿ 2008–09ನೇ ಸಾಲಿನ ರಾಜ್ಯ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ 2551–01–198–6–02 ರ ಅಡಿ ಒಟ್ಟು ರೂ.3171.64 ಲಕ್ಷ ಅನುದಾನ ಹಂಚಿಕೆ ಮಾಡಲಾಗಿದ್ದು, ಈ ಪೈಕಿ 2007–08ನೇ ಸಾಲಿನ ಮೂರನೇ ಕಂತಿನ ಹಾಗೂ ವಿಶೇಷ ಯೋಜನೆಗಳ ಬಾಬ್ತು ಮತ್ತು 2008–09ನೇ ಸಾಲಿನ ಒಂದನೇ ಕಂತು, ಎರಡನೇ ಕಂತು ಹಾಗೂ ವಿಶೇಷ ಯೋಜನೆಗಳ ಬಾಬ್ತು (ಭಾಗಶಃ) ಒಟ್ಟು ರೂ.3101.63 ಲಕ್ಷ ಅನುದಾನವನ್ನು ಸಂಬಂಧಪಟ್ಟ ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡಲಾಗಿದೆ. ಜಿಲ್ಲಾವಾರು ಆಯವ್ಯಯ ಹಂಚಿಕೆಯಲ್ಲಿನ ಕೊರತೆಯಿಂದ ಚಿಕ್ಕಮಗಳೂರು ಹಾಗೂ ಹಾಸನ ಜಿಲ್ಲಾ ಪಂಚಾಯತಿಗಳಿಗೆ ಈ ವಿಶೇಷ ಯೋಜನೆಗಳ ಬಾಬ್ತು ಪೂರ್ಣ ಅನುದಾನ ಬಿಡುಗಡೆ ಮಾಡಲು ಹಾಲಿ ರೂ.47.48 ಲಕ್ಷ ಅನುದಾನದ ಕೊರತೆ ಉಂಟಾಗಿರುತ್ತದೆ. ಈ ಅನುದಾನವನ್ನು ಪ್ರಸಕ್ತ ಸಾಲಿನ ಆಯವ್ಯಯದಲ್ಲಿ ಸದ್ಯಕ್ಕೆ ಹೆಚ್ಚಿನ ಅನುದಾನ ಹಂಚಿಕೆ ಹೊಂದಿರುವ ಮೈಸೂರು, ಬೆಳಗಾಂ ಹಾಗೂ ಧಾರವಾಡ ಜಿಲ್ಲಾ ಪಂಚಾಯತಿಗಳಲ್ಲಿ ಉಳಿಯಬಹುದಾದ ಮೊತ್ತದಿಂದ ಪುನರ್ ವಿನಿಯೋಗದ ಮೂಲಕ ನೀಡಬೇಕಾಗಿದೆ. ಅದಕ್ಕಾಗಿ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ.ಗ್ರಾಅಪ.6.ಡಬ್ಲ್ಯೂಜಿಪಿ.2008, ಬೆಂಗಳೂರು, ದಿನಾಂಕ: 30ನೇ ಮಾರ್ಚ್ 2009**

ಪಶ್ಚಿಮ ಘಟ್ಟಗಳ ಅಭಿವೃದ್ಧಿ ಕಾರ್ಯಕ್ರಮದ ಅನುಷ್ಠಾನಕ್ಕಾಗಿ 2008–09ನೇ ಸಾಲಿನ ರಾಜ್ಯ ಆಯವ್ಯದಲ್ಲಿ ಲೆಕ್ಕಶೀರ್ಷಿಕೆ 2551–01–198–6–02 ರ ಅಡಿ ಚಿಕ್ಕಮಗಳೂರು ಹಾಗೂ ಹಾಸನ ಜಿಲ್ಲಾ ಪಂಚಾಯತಿಗಳಿಗೆ ಅಗತ್ಯವಿರುವ ಒಟ್ಟು ರೂ.47.48 ಲಕ್ಷಗಳನ್ನು (ನಲವತ್ತೇಳು ಲಕ್ಷ ನಲವತ್ತ ಎಂಟು ಸಾವಿರ ರೂಪಾಯಿಗಳು ಮಾತ್ರ) ಮೈಸೂರು, ಬೆಳಗಾಂ ಹಾಗೂ ಧಾರವಾಡ ಜಿಲ್ಲಾ ಪಂಚಾಯತಿಗಳಲ್ಲಿ ಪ್ರಸಕ್ತ ಸಾಲಿನ ಆಯವ್ಯದಲ್ಲಿ ಸದರಿ ಲೆಕ್ಕಶೀರ್ಷಿಕೆಯಡಿ ಲಭ್ಯವಾಗುವ ಅನುದಾನದಿಂದ ಅನುಬಂಧದಲ್ಲಿ (ಪ್ರಪತ್ರ–22ಎ ರಲ್ಲಿ) ತೋರಿಸಿರುವಂತೆ ಪುನರ್ ವಿನಿಯೋಗದ ಮೂಲಕ ಭರಿಸಲು ಮಂಜೂರಾತಿ ನೀಡಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂ.ಎಫ್‌ಡಿ.9.ಟಿಎಫ್‌ಪಿ.2004 ದಿನಾಂಕ:7.4.2005 ರಲ್ಲಿ ಆಡಳಿತ ಇಲಾಖೆಯ ಕಾರ್ಯದರ್ಶಿಗಳಿಗೆ ಪ್ರದತ್ತವಾದ ಅಧಿಕಾರದನ್ವಯ ಸರ್ಕಾರದ ಕಾರ್ಯದರ್ಶಿ, (ಪಂಚಾಯತ್ ರಾಜ್), ಗ್ರಾಮಿಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ರವರ ದಿನಾಂಕ:30.3.2009ರ ಅನುಮೋದನೆ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಾ:ಪಿ.ಸಿ.ಜಾಫರ್**

ನಿರ್ದೇಶಕರು

ಯೋಜನೆ, ಸಮನ್ವಯ ಹಾಗೂ ಮೇಲ್ವಿಚಾರಣಾ ಘಟಕ ಹಾಗೂ ಪದನಿಮಿತ್ತ

ಸರ್ಕಾರದ ಉಪ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ಪಶ್ಚಿಮ ಘಟ್ಟಗಳ ಅಭಿವೃದ್ಧಿ ಕಾರ್ಯಕ್ರಮ**

**ಪ್ರಪತ್ರ 22ಎ–ಕೆಎಫ್‌ಸಿ (ಅನುಚ್ಛೇದ 308)**

**ಆಯವ್ಯಯ ಪತ್ರದಲ್ಲಿ ಅಥವಾ ಹೆಚ್ಚಿನ ಹಣ ಹಂಚಿಕೆ (ಅಲಾಟ್‌ಮೆಂಟ್)ಗಳಲ್ಲಿ ಉಪಬಂಧ ಕಲ್ಪಿಸಿಲ್ಲದ ಎಲ್ಲಾ ವಿನಿಯೋಗಗಳಿಗೆ ಅಥವಾ ಮಂಜೂರಾತಿಗೆ ಲಗತ್ತಿಸಬೇಕಾದ ಪುನರ್ವಿನಿಯೋಗದ ವಿವರಣೆ**

(ರೂ.ಲಕ್ಷಗಳಲ್ಲಿ)

| ಮುಂಗಡ ಪತ್ರದ ಪ್ರಧಾನ, ಚಿಕ್ಕ, ಉಪ ಮತ್ತು ವಿವರವಾದ ಶೀರ್ಷಿಕೆಗಳು | ಹೆಚ್ಚಿಸಲು ಪ್ರಸ್ತಾವಿಸಲಾದ ಅಂದಾಜಿನ ಶೀರ್ಷಿಕೆ | | | | | ಕಡಿಮೆ ಮಾಡಲು ಪ್ರಸ್ತಾವಿಸಲಾದ ಅಂದಾಜಿನ ಶೀರ್ಷಿಕೆ | | | | ಷರಾ |
|---|---|---|---|---|---|---|---|---|---|---|
| | ಮಂಜೂರಾದ ಆಯವ್ಯಯ ಅಂದಾಜಿನಲ್ಲಿರುವ ಮೊತ್ತ | ಈವರೆಗೆ ಆಗಿರುವ ವಾಸ್ತವಿಕ ವೆಚ್ಚ (ಎಂದರೆ) | ವರ್ಷದ ಉಳಿದ ಅವಧಿಯಲ್ಲಿ ಸಂಭವನೀಯ ವೆಚ್ಚ | ಬೇಕಾದ ಹೆಚ್ಚಿನ ಅಲಾಟ್ ಮೆಂಟ್ ವಿವರ | | ಮಂಜೂರಾದ ಆಯವ್ಯಯ ಅಂದಾಜಿನಲ್ಲಿರುವ ಮೊತ್ತ | ಈವರೆಗೆ ಆಗಿರುವ ವಾಸ್ತವಿಕ ವೆಚ್ಚ (ಎಂದರೆ) | ವರ್ಷದ ಉಳಿದ ಅವಧಿಯಲ್ಲಿ ಸಂಭವನೀಯ ವೆಚ್ಚ | ಪುನರ್ವಿನಿಯೋಗಕ್ಕೆ ಲಭ್ಯವಿರುವ ಮೊತ್ತ | ಹಣ ಹಂಚಿಕೆ (ಅಲಾಟ್‌ಮೆಂಟ್) ಮೀರಿರುವುದಕ್ಕೆ ಮತ್ತು ಉಳಿತಾಯ ನಿರೀಕ್ಷಿಸುವುದಕ್ಕೆ ಕಾರಣಗಳನ್ನು ಎಲ್ಲಿ ಪೂರ್ಣವಾಗಿ ವಿವರಿಸಬೇಕು. |
| 1 | 2 | 3 | 4 | 5 | | 6 | 7 | 8 | 9 | 10 |
| 2551–01–198–6–02 | | | | | | | | | | ಕೇಂದ್ರ ಸರ್ಕಾರವು ಬಿಡುಗಡೆ ಮಾಡಿರುವ ಅನುದಾನವನ್ನು ಮರು ಬಿಡುಗಡೆ ಮಾಡಲು, ಸದರಿ ಜಿಲ್ಲೆಗಳಿಗೆ ರಾಜ್ಯ ಆಯವ್ಯಯ ಹಂಚಿಕೆಯಲ್ಲಿನ ಕೊರತೆಯಿಂದ ಹೆಚ್ಚುವರಿ ಅನುದಾನ ಬೇಕಾಗಿರುತ್ತದೆ. |
| 1.ಹಾಸನ –410 | 254.16 | 254.16 | 30.26 | 30.26 | | | | | | |
| 2.ಚಿಕ್ಕಮಗಳೂರು–408 | 254.57 | 254.57 | 17.22 | 17.22 | | | | | | |
| **ಒಟ್ಟು** | **508.73** | **508.73** | **47.48** | **47.48** | | | | | | |
| 1.ಮೈಸೂರು –407 | | | | | | 107.34 | 85.53 | 0.01 | 21.80 | ಕೇಂದ್ರ ಸರ್ಕಾರವು ಬಿಡುಗಡೆ ಮಾಡಿರುವ ಅನುದಾನವನ್ನು ಮರು ಬಿಡುಗಡೆ ಮಾಡಲು, ಸದರಿ ಜಿಲ್ಲೆಗಳಲ್ಲಿ ರಾಜ್ಯ ಆಯವ್ಯಯದಲ್ಲಿನ ಹೆಚ್ಚುವರಿ ಹಂಚಿಕೆಯಿಂದ ಉಳಿತಾಯವಾಗುತ್ತಿರುವ ಅನುದಾನದಿಂದ ಪುನರ್ ವಿನಿಯೋಗ ಮಾಡಬಹುದು. |
| 2.ಬೆಳಗಾಂ –413 | | | | | | 493.65 | 477.91 | 0.06 | 15.68 | |
| 3.ಧಾರವಾಡ –415 | | | | | | 61.27 | 50.28 | 0.99 | 10.00 | |
| **ಒಟ್ಟು** | | | | | | **662.26** | **613.72** | **1.06** | **47.48** | |

ಸಂ.ಗ್ರಾಅಪ:6:ಡಬ್ಲ್ಯೂಜಿಪಿ:2008 ದಿನಾಂಕ:30.03.2009

**ಕೆ.ಆರ್. ಶಶಿಧರ್**

ಸರ್ಕಾರದ ಕಾರ್ಯದರ್ಶಿ (ಪಂಚಾಯತ್ ರಾಜ್)

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

ಪಿ.ಆರ್. 1187

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ:** ಶ್ರೀ ಕೇದಾರ್‌ನಾಥ್ ಶುಗರ್ಸ್ ಅಂಡ್ ಆಗ್ರೋ ಪ್ರಾಜೆಕ್ಟ್ (ಲಿ), ಕೆರಕಲಮಟ್ಟಿ, ಬಾದಾಮಿ ತಾಲ್ಲೂಕು, ಬಾಗಲಕೋಟೆ ಜಿಲ್ಲೆ, ಈ ಕಾರ್ಖಾನೆಯ ಸಾಮರ್ಥ್ಯವನ್ನು ಈಗಿರುವ 2500 ಟಿಸಿಡಿ ಯಿಂದ 3500 ಟಿಸಿಡಿ ಸಾಮರ್ಥ್ಯಕ್ಕೆ ವಿಸ್ತರಿಸಿಕೊಳ್ಳಲು ಸರ್ಕಾರದ ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಸಿಐ 187 ಎಸ್‌ಜಿಎಫ್ 2007, ದಿನಾಂಕ:11.09.2007.
2. ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪತ್ರ ಸಂಖ್ಯೆ:ಡಿಎಸ್‌ಕೆ/ಡಿಇವಿ/98/2007–08, ದಿನಾಂಕ: 01.01.2009.

**ಪ್ರಸ್ತಾವನೆ:**

ಮೇಲೆ ಓದಲಾದ (2) ರಲ್ಲಿರುವ ಆಯುಕ್ತರು ಕಬ್ಬು ಅಭಿವೃದ್ಧಿರವರ ಪತ್ರದಲ್ಲಿ ಶ್ರೀ ಕೇದಾರ್‌ನಾಥ್ ಶುಗರ್ಸ್ ಅಂಡ್ ಆಗ್ರೋ ಪ್ರಾಜೆಕ್ಟ್ (ಲಿ), ಕೆರಕಲಮಟ್ಟಿ, ಬಾದಾಮಿ ತಾಲ್ಲೂಕು, ಬಾಗಲಕೋಟೆ ಜಿಲ್ಲೆ, ಈ ಕಾರ್ಖಾನೆಯ ಕಬ್ಬು ಅರೆಯುವ ಸಾಮರ್ಥ್ಯವನ್ನು ಈಗಿರುವ 2500 ಟಿಸಿಡಿ ಯಿಂದ 3500 ಟಿಸಿಡಿ ಸಾಮರ್ಥ್ಯಕ್ಕೆ ವಿಸ್ತರಿಸಲು ಉದ್ದೇಶಿಸಿದ್ದಾರೆಂದು ತಿಳಿಸಿ, ಈ ಕಾರ್ಖಾನೆಯ ಸಾಮರ್ಥ್ಯ ವಿಸ್ತರಣೆಗೆ ಸರ್ಕಾರದ ಅನುಮತಿಯನ್ನು ನೀಡಲು ಶಿಫಾರಸ್ಸು ಮಾಡಿದ್ದಾರೆ.

ಆಯುಕ್ತರ ಪ್ರಸ್ತಾವನೆಯನ್ನು ಮೇಲೆ ಓದಲಾದ (1)ರಲ್ಲಿನ ಆದೇಶದಲ್ಲಿ ಅಳವಡಿಸಿಕೊಳ್ಳಲಾಗಿರುವ ನೀತಿಯನ್ವಯ ಕೂಲಂಕುಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಐ 09 ಎಸ್‌ಜಿಎಫ್ 2009, ಬೆಂಗಳೂರು, ದಿನಾಂಕ: 10ನೇ ಫೆಬ್ರವರಿ 2009**

ಶ್ರೀ ಕೇದಾರ್‌ನಾಥ್ ಶುಗರ್ಸ್ ಅಂಡ್ ಆಗ್ರೋ ಪ್ರಾಡೆಕ್ಟ್ (ಲಿ), ಕೆರಕಲಮಟ್ಟಿ, ಬಾದಾಮಿ ತಾಲ್ಲೂಕು, ಬಾಗಲಕೋಟೆ ಜಿಲ್ಲೆ, ಈ ಕಾರ್ಖಾನೆಯ ಕಬ್ಬು ಅರೆಯುವ ಸಾಮರ್ಥ್ಯವನ್ನು ಈಗಿರುವ 2500 ಟಿಸಿಡಿ ಯಿಂದ 3500 ಟಿಸಿಡಿ ಸಾಮರ್ಥ್ಯಕ್ಕೆ ವಿಸ್ತರಿಸಿಕೊಳ್ಳಲು ಸರ್ಕಾರದ ಅನುಮೋದನೆಯನ್ನು ಕಾರ್ಖಾನೆಗೆ ಈಗಾಗಲೇ ಹಂಚಿಕೆ ಮಾಡಿರುವ ಕಬ್ಬಿನ ಮೀಸಲು ಪ್ರದೇಶಗಳಿಂದಲೇ ಹೆಚ್ಚುವರಿಯಾಗಿ ಬೇಕಾಗುವ ಕಬ್ಬನ್ನು ಪಡೆಯಬೇಕು ಹಾಗೂ ಹೆಚ್ಚುವರಿ ಕಬ್ಬಿನ ಮೀಸಲು ಕ್ಷೇತ್ರಗಳನ್ನು ಹಂಚಿಕೆ ಮಾಡಲು ಬೇಡಿಕೆ ಸಲ್ಲಿಸಬಾರದೆಂಬ ಷರತ್ತನ್ನು ವಿಧಿಸಿ, ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 614

**ಪಿ. ಆನಂದ್‌ಕುಮಾರ್**

ಪೀಠಾಧಿಕಾರಿ (ಸಕ್ಕರೆ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಡಾ: ಅರುಣ್ ಕುಮಾರ್ ಹರಿದಾಸ್, ಉಪನ್ಯಾಸಕರು, ಎದೆಗೂಡಿನ ಶಸ್ತ್ರ ಚಿಕಿತ್ಸಾ ವಿಭಾಗ, ಎಸ್.ಡಿ.ಎಸ್. ಕ್ಷಯ ಮತ್ತು ರಾಜೀವ್‌ಗಾಂಧಿ ಎದೆಗೂಡಿನ ರೋಗಗಳ ಸಂಸ್ಥೆ, ಬೆಂಗಳೂರು ಇವರ ರಾಜೀನಾಮೆಯನ್ನು ಅಂಗೀಕರಿಸುವ ಬಗ್ಗೆ.

**ಓದಲಾಗಿದೆ:**
1. ಪತ್ರ ಸಂಖ್ಯೆ: ಬೆಂವೈವಿ:ಸಿಬ್ಬಂದಿ(2)237/2000–01 ದಿನಾಂಕ: 28.07.2008.
2. ಸರ್ಕಾರದ ಆದೇಶ ಸಂಖ್ಯೆ: ಆಕುಕ 45 ಕೆವಿಎಂ 2008 ದಿನಾಂಕ: 30.08.2008.

**ಪ್ರಸ್ತಾವನೆ:**

ನಿರ್ದೇಶಕರು, ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ ಇವರು ಕ್ರಮಸಂಖ್ಯೆ (1)ರ ದಿನಾಂಕ: 28.07.2008ರ ಪತ್ರದಲ್ಲಿ ಡಾ: ಅರುಣ್ ಕುಮಾರ್ ಹರಿದಾಸ್, ಉಪನ್ಯಾಸಕರು, ಎದೆಗೂಡಿನ ಶಸ್ತ್ರ ಚಿಕಿತ್ಸಾ ವಿಭಾಗ, ಎಸ್.ಡಿ.ಎಸ್. ಕ್ಷಯ ಮತ್ತು ರಾಜೀವ್‌ಗಾಂಧಿ ಎದೆಗೂಡಿನ ರೋಗಗಳ ಸಂಸ್ಥೆ, ಬೆಂಗಳೂರು ಇವರು ದಿನಾಂಕ: 01.02.2004 ರಿಂದ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿರುವುದಾಗಿ ವರದಿ ಮಾಡಿರುತ್ತಾರೆ. ಅನಧಿಕೃತ ಗೈರುಹಾಜರಿ ಬಗ್ಗೆ ವಿಶ್ವವಿದ್ಯಾಲಯದಿಂದ ಸದರಿಯವರಿಗೆ ಜಾರಿ ಮಾಡಲಾದ ನೋಟೀಸ್‌ನ್ನು ಖುದ್ದಾಗಿ ಸ್ವೀಕರಿಸಿ ನೋಟೀಸಿಗೆ ಉತ್ತರವಾಗಿ ಕರ್ತವ್ಯಕ್ಕೆ ರಾಜೀನಾಮೆ ಪತ್ರವನ್ನು ಸಲ್ಲಿಸಿರುತ್ತಾರೆ. ಡಾ: ಅರುಣ್ ಕುಮಾರ್ ಹರಿದಾಸ್, ಉಪನ್ಯಾಸಕರು, ಎದೆಗೂಡಿನ ಶಸ್ತ್ರ ಚಿಕಿತ್ಸಾ ವಿಭಾಗ, ಎಸ್.ಡಿ.ಎಸ್. ಕ್ಷಯ ಮತ್ತು ರಾಜೀವ್‌ಗಾಂಧಿ ಎದೆಗೂಡಿನ ರೋಗಗಳ ಸಂಸ್ಥೆ, ಬೆಂಗಳೂರು ಇವರಿಂದ ಸಂಸ್ಥೆಗೆ ಯಾವುದೇ ಬಾಕಿ ಇರುವುದಿಲ್ಲವೆಂದು ದೃಢೀಕರಿಸಿ ಅನಧಿಕೃತ ಗೈರುಹಾಜರಾದ ದಿನಾಂಕ: 01.02.2004 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ರಾಜೀನಾಮೆಯನ್ನು ಅಂಗೀಕರಿಸಲು ಶಿಫಾರಸ್ಸು ಮಾಡಿರುತ್ತಾರೆ.

ಏತನ್ಮಧ್ಯೆ ಮೇಲೆ (2)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಡಾ: ಅರುಣ್ ಕುಮಾರ್ ಹರಿದಾಸ್, ಉಪನ್ಯಾಸಕರು, ಎದೆಗೂಡಿನ ಶಸ್ತ್ರ ಚಿಕಿತ್ಸಾ ವಿಭಾಗ, ಎಸ್.ಡಿ.ಎಸ್. ಕ್ಷಯ ಮತ್ತು ರಾಜೀವ್‌ಗಾಂಧಿ ಎದೆಗೂಡಿನ ರೋಗಗಳ ಸಂಸ್ಥೆ, ಬೆಂಗಳೂರು ಅವರ ನಿರಂತರ ಅನಧಿಕೃತ ಗೈರುಹಾಜರಿ ದುರ್ನಡತೆಗಾಗಿ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಬಾಕಿ ಇಟ್ಟು ಅಮಾನತ್ತಿನಲ್ಲಿಡಲಾಗಿತ್ತು.

ವಿಷಯವನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕೂಲಂಕುಷವಾಗಿ ಪರಿಶೀಲಿಸಿದ ನಂತರ ಡಾ: ಅರುಣ್ ಕುಮಾರ್ ಹರಿದಾಸ್, ಉಪನ್ಯಾಸಕರು, ಎದೆಗೂಡಿನ ಶಸ್ತ್ರ ಚಿಕಿತ್ಸಾ ವಿಭಾಗ, ಎಸ್.ಡಿ.ಎಸ್. ಕ್ಷಯ ಮತ್ತು ರಾಜೀವ್‌ಗಾಂಧಿ ಎದೆಗೂಡಿನ ರೋಗಗಳ ಸಂಸ್ಥೆ, ಬೆಂಗಳೂರು ಇವರ ಅಮಾನತ್ತು ಆದೇಶವನ್ನು ಹಿಂದಕ್ಕೆ ಪಡೆದು ದಿನಾಂಕ: 01.02.2004 ರಿಂದ ಜಾರಿಗೆ ಬರುವಂತೆ ರಾಜೀನಾಮೆಯನ್ನು ಅಂಗೀಕರಿಸಲು ಸರ್ಕಾರವು ತೀರ್ಮಾನಿಸಿ ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 469 ಎಂಎಂಸಿ 2008, ಬೆಂಗಳೂರು, ದಿನಾಂಕ: 11ನೇ ಫೆಬ್ರವರಿ 2009**

ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಗಳು 1957ರ ನಿಯಮ 10(5)ರ ಪ್ರಕಾರ ಡಾ: ಅರುಣ್ ಕುಮಾರ್ ಹರಿದಾಸ್, ಉಪನ್ಯಾಸಕರು, ಎದೆಗೂಡಿನ ಶಸ್ತ್ರ ಚಿಕಿತ್ಸಾ ವಿಭಾಗ, ಎಸ್.ಡಿ.ಎಸ್. ಕ್ಷಯ ಮತ್ತು ರಾಜೀವ್‌ಗಾಂಧಿ ಎದೆಗೂಡಿನ ರೋಗಗಳ ಸಂಸ್ಥೆ, ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಬೆಂಗಳೂರು ಇವರನ್ನು ಅಮಾನತ್ತಿನಲ್ಲಿಟ್ಟಿದ್ದ ಸರ್ಕಾರಿ ಆದೇಶ ಸಂಖ್ಯೆ: ಆಕುಕ 45 ಕೆವಿಎಂ 2008 ದಿನಾಂಕ: 30.08.2008 ಅನ್ನು ಇವರಿಗೆ ಸಂಬಂಧಿಸಿದಂತೆ ಮಾತ್ರ ಹಿಂದಕ್ಕೆ ಪಡೆಯಲಾಗಿದೆ.

ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 252ರ ಪ್ರಕಾರ ಡಾ: ಅರುಣ್ ಕುಮಾರ್ ಹರಿದಾಸ್, ಉಪನ್ಯಾಸಕರು, ಎದೆಗೂಡಿನ ಶಸ್ತ್ರ ಚಿಕಿತ್ಸಾ ವಿಭಾಗ, ಎಸ್.ಡಿ.ಎಸ್. ಕ್ಷಯ ಮತ್ತು ರಾಜೀವ್‌ಗಾಂಧಿ ಎದೆಗೂಡಿನ ರೋಗಗಳ ಸಂಸ್ಥೆ, ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಬೆಂಗಳೂರು ಇವರ ರಾಜೀನಾಮೆಯನ್ನು ಅವರು ಅನಧಿಕೃತವಾಗಿ ಗೈರುಹಾಜರಾದ ದಿನಾಂಕ: 01.02.200 ರಿಂದ ಜಾರಿಗೆ ಬರುವಂತೆ ಅಂಗೀಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 726

**ವಿ. ಶ್ರೀರಾಮರೆಡ್ಡಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ. (ವೈದ್ಯಕೀಯ ಶಿಕ್ಷಣ)

**HEALTH AND FAMILY WELFARE SECRETARIAT**

**Sub:** Continuation of appointment of Procurement Consultant under KHSDRP-reg.

**Read:**
1. 2nd Meeting of the Programme Steering Committee dt. 9.10.2007.
2. Notification No. DCA 7 ARB 2007.
3. Proceedings of the 10th meeting of the Programme Steering Committee held on dt. 5.11.08 issued on 18.11.2008.

**Preamble:-**

Sri K.N. Venkata Raman was appointed as a part time Procurement Consultant for a period of one year from 28.11.2007, vide Govt Order No. HFW/KHSDRP/Sect-14/2007, dt. 26.11.2007, with a remuneration of Rs. 3,000/- (Rupees three thousand only) for half a day and Rs. 5,000/- (Rupees five thousand only) for a day with an annual ceiling of Rs.4,80,000/- (Rupees four lakhs eighty thousand only).

The Programme Steering Committee in the meeting held on 5.11.2008 decided to continue the services of Sri K.N. Venkata Rama as a part time Procurement Consultant for a further period of one year subject to World Bank approval. The World Bank has given its "No Objection" for the continuation vide e-mail dated 12.1.2009, with a suggestion to include certain items in his scope of work.

Hence, the following order.

**Govt Order No: HFW/KHSDRP/Sect-14/2007, Bangalore, Dated: 20th February 2009**

Under the circumstances mentioned in the preamble, Government are pleased to continue the services of Sri K.N. Venkataka Raman as part time procurement Consultant till 27.11.2009 for KHSDRP, NRHM and Karnataka State Drug Logistics and Warehouse Society with a remuneration of Rs. 3,000/- (Rupees three thousand) only for half a day and Rs. 5,000/- (Rupees five thousand) only per day of work, not exceeding 10 days in a month.

The payment will be made on a monthly basis and will not exceed a total amount of Rs. 4,80,000/- (Rupees four lakhs and eighty thousand only) for the extended period (28.11.2008 to 27.11.2009). The remuneration includes all overheads and any taxes imposed.

The Consultant shall execute supplementary Contract Agreement long with supplementary ToR to include the suggestion of the World Bank conveyed vide e-mail of 12.1.2009.

The above expenditure towards his consultancy shall be debited under the budget head "2210-06-800-0-84-051 (Central Expenses) during the conract period.

By Order and in the name of Governor of Karnataka,

**SUSHAMA GODBOLE**

P.R. 727

Deputy Secretary to Government,
KHSDRP, Health and Family Welfare Department.

**ಕಂದಾಯ ಸಚಿವಾಲಯ**

**ವಿಷಯ:** ಶ್ರೀ ಹೆಚ್.ಪಿ. ನಾಗರಾಜ್, ಹಿಂದಿನ ತಹಶೀಲ್ದಾರ್, ಹೊಳಲ್ಕೆರೆ ತಾಲ್ಲೂಕು ಇವರ ವಿರುದ್ಧದ ಇಲಾಖಾ ವಿಚಾರಣೆ ಬಗ್ಗೆ – ಇವರಿಗೂ ದೋಷಮುಕ್ತಗೊಳಿಸಿ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂ: ಆರ್‌ಡಿ 57 ಎಡಿಇ 2004, ದಿನಾಂಕ: 20.09.2008.

2. ಶ್ರೀ ಹೆಚ್.ಪಿ. ನಾಗರಾಜ್, ತಹಶೀಲ್ದಾರ್ ಇವರ ಮೇಲ್ಮನವಿ ದಿನಾಂಕ: 16.11.2008.

**ಪ್ರಸ್ತಾವನೆ:**

ಶ್ರೀ ಹೆಚ್.ಪಿ. ನಾಗರಾಜ್, ತಹಶೀಲ್ದಾರ್ ಹೊಳಲ್ಕೆರೆ ತಾಲ್ಲೂಕು ಇವರು ಈ ಹಿಂದೆ ಆಲೂರು ತಾಲ್ಲೂಕು ತಹಶೀಲ್ದಾರರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ದಿನಾಂಕ: 10.01.2004 ರಂದು (2ನೇ ಶನಿವಾರ) ಸಕಲೇಶಪುರ ಉಪವಿಭಾಗಾಧಿಕಾರಿಯವರಿಂದ ಪೂರ್ವಾನುಮತಿ ಪಡೆಯದೇ ಕೇಂದ್ರ ಸ್ಥಾನ ಬಿಟ್ಟಿದ್ದರಿಂದ ಹಾಗೂ ಸದರಿ ಅಧಿಕಾರಿಯವರು ಈ ಹಿಂದೆ ಸಾಗರ ತಾಲ್ಲೂಕು ತಹಶೀಲ್ದಾರರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಚುನಾವಣೆ ಕೆಲಸದಲ್ಲಿ ಆಸಕ್ತಿ ವಹಿಸದೇ ದಿನಾಂಕ: 08.05.2004, 09.05.2004 ಮತ್ತು 10.05.2004 ರಂದು ಚುನಾವಣಾ ಕೆಲಸ ಕಾರ್ಯಗಳನ್ನು ನಿರ್ಲಕ್ಷಿಸಿ, ಅನಧಿಕೃತವಾಗಿ ಚುನಾವಣಾ ಕೆಲಸಕ್ಕೆ ಅಡಚಣೆ ಉಂಟು ಮಾಡಿ ಕರ್ತವ್ಯ ಚ್ಯುತಿ ಎಸಗಿದ ಕಾರಣ, ಇವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸಿ, ಇವರ ವಿರುದ್ಧ ಆರೋಪಗಳು ಸಾಬೀತಾದ ಹಿನ್ನೆಲೆಯಲ್ಲಿ, ಮೇಲೆ ಕ್ರ.ಸಂ:(1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಇವರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 8(iii) ರನ್ವಯ 2 ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮ ಸಹಿತವಾಗಿ ತಡೆಹಿಡಿಯುವ ದಂಡನೆಯನ್ನು ವಿಧಿಸಿ ಆದೇಶಿಸಲಾಗಿತ್ತು.

ಮೇಲ್ಕಂಡ ಆದೇಶದ ವಿರುದ್ಧ ಅಧಿಕಾರಿಯವರು ಮೇಲೆ ಕ್ರ.ಸಂ:(2) ರಲ್ಲಿ ಓದಲಾದ ಪುನರ್ ಪರಿಶೀಲನಾ ಅರ್ಜಿಯನ್ನು ಸಿಸಿಎ ನಿಯಮಾವಳಿಯ ಅನ್ವಯ ಸಲ್ಲಿಸಿರುತ್ತಾರೆ. ಸದರಿ ಮೇಲ್ಮನವಿಯಲ್ಲಿ ಅಧಿಕಾರಿಯವರು ಆರೋಪ ಒಂದಕ್ಕೆ ಸಂಬಂಧಿಸಿದಂತೆ, ತಮ್ಮ ಮಗನಿಗೆ ಹುಷಾರಿಲ್ಲದ ಕಾರಣ ಚಿಕಿತ್ಸೆ ಕೊಡಿಸಲು ಒಂದು ದಿನದ ಮಟ್ಟಿಗೆ ಅಂದರೆ ದಿನಾಂಕ:10.01.2004ರಂದು ಊರಿಗೆ ಹೋಗಿರುವುದಾಗಿ ತಿಳಿಸಿದ್ದು, ಈ ಬಗ್ಗೆ ಸಂಬಂಧಿಸಿದವರನ್ನು ದೂರವಾಣಿಯಲ್ಲಿ ಸಂಪರ್ಕಿಸಿದಾಗ ದೊರೆಯದೆ ಕಾರಣ ಪೂರ್ವಾನುಮತಿಯನ್ನು ಪಡೆಯಲಿಲ್ಲವೆಂದು ತಿಳಿಸಿರುವರು.

ಆರೋಪ ಎರಡಕ್ಕೆ ಸಂಬಂಧಿಸಿದಂತೆ, ತಾವು ಆಲೂರು ತಹಶೀಲ್ದಾರರಾಗಿದ್ದಾಗ ಅತಿ ಹೆಚ್ಚು ಪ್ರಕರಣಗಳನ್ನು ಸಕ್ರಮ ಸಮಿತಿಯಲ್ಲಿ ಮಂಡಿಸಿ ವಿಲೇವಾರಿ ಮಾಡಿಸಿರುತ್ತೇನೆಂದು ತಿಳಿಸಿರುತ್ತಾರೆ. ಸಕ್ರಮ ಸಭಾ ನಡುವಳಿ ಬುಕ್ಕಿನಲ್ಲಿ ಶಾಸಕರ ಸಹಿ ಪಡೆಯುವುದು ವಾಡಿಕೆಯಾಗಿರುತ್ತದೆ. ಅದರಂತೆ ಅವರ ಸಹಿಯನ್ನು ಪಡೆಯಲಾಗಿದೆ. ಪ್ರತಿಯೊಂದು ಪ್ರಕರಣಗಳಲ್ಲಿ ಶಾಸಕರ ಸಹಿ ಪಡೆಯುವ ವಾಡಿಕೆ ಇರುವುದಿಲ್ಲ. ಈ ಕ್ರಮದಿಂದ ಸರ್ಕಾರದ ಬೊಕ್ಕಸಕ್ಕಾಗಲೀ ಅಥವಾ ಸರ್ಕಾರದ ಯೋಜನೆಯ ಅನುಷ್ಠಾನದಲ್ಲಾಗಲೀ ಉದಾಸೀನತೆ ತೋರಿರುವುದಿಲ್ಲವೆಂದು ತಿಳಿಸಿರುವರು. ತಾವು ಸಾಗರ ತಾಲ್ಲೂಕು ತಹಶೀಲ್ದಾರರಾಗಿದ್ದಾಗ ತಮ್ಮ ಸೋದರಿ ಮದುವೆಗೆ ದಿನಾಂಕ: 10.05.2004 ರಂದು ಒಂದು ದಿನ ಸಾಂದರ್ಭಿಕ ರಜೆಯನ್ನು ಸಹಾಯಕ ಆಯುಕ್ತರು, ಸಾಗರ್ ಇವರಿಗೆ ರಜೆ ಅರ್ಜಿ ಸಲ್ಲಿಸಿ, ಚುನಾವಣೆಗೆ ನೇಮಿಸಿದ ಅಧಿಕಾರಿಯವರಿಗೆ ಮೌಖಿಕವಾಗಿ ತಿಳಿಸಿ ಸ್ವಂತ ಊರಿಗೆ ಹೋಗಿರುತ್ತೇನೆ. ಇದಕ್ಕೆ ಸಮರ್ಥನೆಯಾಗಿ ಅಧಿಕಾರಿಯವರು ಮದುವೆ ನಿಗದಿಪಡಿಸಿದ ಪತ್ರವನ್ನು ಲಗತ್ತಿಸಿರುತ್ತಾರೆ. ಇದರಿಂದಾಗಿ ಚುನಾವಣೆ ಕೆಲಸಕ್ಕೆ ಅಡ್ಡಿಯಾಗಿಲ್ಲ. ಈ ಅವಧಿಯಲ್ಲಿ ಚುನಾವಣೆ ಅಧಿಕಾರಿಯಿಂದ ಒಂದು ನೋಟೀಸು ಪಡೆದಿರುವುದಿಲ್ಲ. ದೂರುಗಳು ಸಹ ಇರುವುದಿಲ್ಲ. ಚುನಾವಣೆಯಲ್ಲಿ ಕೈಗೊಂಡ ಕೆಲಸದ ಬಗ್ಗೆ ಜಿಲ್ಲಾಧಿಕಾರಿಗಳು ಮೆಚ್ಚುಗೆಯನ್ನು ವ್ಯಕ್ತಪಡಿಸಿರುತ್ತಾರೆ. ಆದುದರಿಂದ ಸದರಿ ಆರೋಪವು ಸತ್ಯಕ್ಕೆ ದೂರವಾಗಿರುತ್ತದೆ. ಈ ಮೇಲ್ಕಂಡ ತಮ್ಮ ಸಮಜಾಯಿಷಿಯ ಹಿನ್ನೆಲೆಯಲ್ಲಿ ತಮಗೆ ವಿಧಿಸಿರುವ 2 ವಾರ್ಷಿಕ ವೇತನ ಬಡ್ತಿಯನ್ನು ತಡೆಹಿಡಿಯುವ ದಂಡನೆಯನ್ನು ರದ್ದುಪಡಿಸಿ ಅಮಾನತ್ತಿನ ಅವಧಿ ಸಕ್ರಮಗೊಳಿಸಿ ಆರೋಪದಿಂದ ಮುಕ್ತಗೊಳಿಸಲು ಕೋರಿರುತ್ತಾರೆ.

ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ: ಆರ್‌ಡಿ 57 ಎಡಿಇ 2004, ಬೆಂಗಳೂರು, ದಿನಾಂಕ: 25ನೇ ಫೆಬ್ರವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಸರ್ಕಾರವು ಅಧಿಕಾರಿಯವರ ಮೇಲ್ಮನವಿಯನ್ನು ಎತ್ತಿ ಹಿಡಿದು, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಯ ನಿಯಮ 25 ರಂತೆ ಸರ್ಕಾರದ ಆದೇಶ ಸಂ: ಆರ್‌ಡಿ 55 ಎಡಿಇ 2004, ದಿನಾಂಕ: 20.09.2008ರ ಆದೇಶದಲ್ಲಿ ಇವರಿಗೆ ವಿಧಿಸಲಾದ 2 ವಾರ್ಷಿಕ ಬಡ್ತಿಗಳನ್ನು ಸಂಚಿತ ಪರಿಣಾಮ ಸಹಿತವಾಗಿ ತಡೆಹಿಡಿಯುವ ದಂಡನೆಯನ್ನು ರದ್ದುಪಡಿಸಿದೆ ಹಾಗೂ ಆರೋಪಗಳಿಂದ ದೋಷಮುಕ್ತಗೊಳಿಸಿದೆ. ಇವರ ಅಮಾನತ್ತಿನಲ್ಲಿ ಕಳೆದ ಅವಧಿ ದಿನಾಂಕ: 11.05.2004 ರಿಂದ 05.09.2004ರ ವರೆಗಿನ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಗಳು 100(1)(6)ರ ಪ್ರಕಾರ ಕರ್ತವ್ಯದ ಅವಧಿಯೆಂದು ಪರಿಗಣಿಸಿದೆ. ಅಧಿಕಾರಿಯವರು ಇನ್ನು ಮುಂದೆ ಎಚ್ಚರಿಕೆಯಿಂದಿರುವಂತೆ ಸಹ ಸೂಚಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 729

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–3)

**ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ**

**ವಿಷಯ:** ಅಂಗವಿಕಲರ ಕಲ್ಯಾಣಕ್ಕಾಗಿ ವಿಶೇಷವಾಗಿ ಶ್ರಮಿಸಿದ ವ್ಯಕ್ತಿ ಮತ್ತು ಸಂಸ್ಥೆಗಳಿಗೆ ನೀಡುವ ಪ್ರಶಸ್ತಿಗಳ ಸಂಖ್ಯೆಯನ್ನು 06 ರಿಂದ 08ಕ್ಕೆ ಹೆಚ್ಚಿಸುವ ಬಗ್ಗೆ.

**ಉಲ್ಲೇಖ:**
1. ಸರ್ಕಾರದ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಎಲ್/153/ಪಿಎಚ್‌ಪಿ/91, ದಿನಾಂಕ: 25.07.1992.
2. ಸರ್ಕಾರದ ಆದೇಶ ಸಂಖ್ಯೆ: ಮಮಅ/416/ಪಿಎಚ್‌ಪಿ/97(ಭಾ), ದಿನಾಂಕ: 23.07.1998.
3. ಸರ್ಕಾರದ ಆದೇಶ ಸಂಖ್ಯೆ: ಮಮಅ/552/ಪಿಎಚ್‌ಪಿ/2000, ದಿನಾಂಕ: 02.12.2000.
4. ಸರ್ಕಾರದ ಆದೇಶ ಸಂಖ್ಯೆ: ಮಮಅ/554/ಪಿಎಚ್‌ಪಿ/2001, ದಿನಾಂಕ: 01.12.2001.
5. ಸರ್ಕಾರದ ಆದೇಶ ಸಂಖ್ಯೆ: ಮಮಅ/647/ಪಿಎಚ್‌ಪಿ/2002, ದಿನಾಂಕ: 18.02.2003.
6. ನಿರ್ದೇಶಕರು, ಅಂಗವಿಕಲರ ಮತ್ತು ಹಿರಿಯ ನಾಗರೀಕರ ಕಲ್ಯಾಣ ಇಲಾಖೆ ಇವರ ಪತ್ರ ಸಂಖ್ಯೆ: ನಿಅಕಇ/ರಾಪ್ರ/24/ಪ್ರಶಸ್ತಿ/2008–09/11523, ದಿನಾಂಕ: 12.02.2009.

**ಪ್ರಸ್ತಾವನೆ:**

ಮೇಲೆ ಓದಲಾದ (1)ರಲ್ಲಿ ಅಂಗವಿಕಲರ ಕಲ್ಯಾಣಕ್ಕಾಗಿ ವಿಶೇಷವಾಗಿ ಶ್ರಮಿಸಿದ ವ್ಯಕ್ತಿ ಮತ್ತು ಸಂಸ್ಥೆಗಳಿಗೆ, ತಲಾ ಒಂದರಂತೆ, ಎರಡು ಪ್ರಶಸ್ತಿಗಳನ್ನು ಘೋಷಿಸಲಾಗುತ್ತಿದೆ. ವೈಯಕ್ತಿಕ ಪ್ರಶಸ್ತಿ ವಿಜೇತರಿಗೆ ರೂ.5,000/–ಗಳು ಹಾಗೂ ಸಂಸ್ಥೆಗೆ ರೂ.15,000/–ಗಳ ನಗದು ಹಣ ನೀಡುವುದಕ್ಕೆ ಅವಕಾಶ ಕಲ್ಪಿಸಲಾಗಿದೆ.

ಮೇಲೆ ಓದಲಾದ (2) ರಲ್ಲಿ ವೈಯಕ್ತಿಕ ಪ್ರಶಸ್ತಿ ಹಾಗೂ ಸಂಸ್ಥೆಯ ಪ್ರಶಸ್ತಿ ವಿಜೇತರಿಗೆ ಕೊಡಲಾಗುತ್ತಿದ್ದ ನಗದು ಹಣವನ್ನು ಕ್ರಮವಾಗಿ ರೂ.5,000/– ಗಳಿಂದ 10,000/–ಗಳಿಗೆ ಹಾಗೂ ರೂ.15,000/–ಗಳಿಂದ ರೂ.25,000/–ಗಳಿಗೆ ಹೆಚ್ಚಿಸಲಾಗಿದೆ.

ಮೇಲೆ ಓದಲಾದ (3)ರಲ್ಲಿ ವೈಯಕ್ತಿಕ ಪ್ರಶಸ್ತಿಗಳ ಸಂಖ್ಯೆಯನ್ನು 03ಕ್ಕೆ ಹೆಚ್ಚಿಸಿದ್ದು, ಮೇಲೆ ಓದಲಾದ (4)ರಲ್ಲಿ ಈ ಸಂಖ್ಯೆಯನ್ನು 03 ರಿಂದ 05ಕ್ಕೆ ಹಾಗೂ ಮೇಲೆ ಓದಲಾದ (5)ರಲ್ಲಿ ವೈಯಕ್ತಿಕ ಪ್ರಶಸ್ತಿಗಳ ಸಂಖ್ಯೆಯನ್ನು 05 ರಿಂದ 06ಕ್ಕೆ ಹೆಚ್ಚಿಸಲಾಗಿದೆ.

ಮೇಲೆ ಓದಲಾದ (6)ರಲ್ಲಿ ನಿರ್ದೇಶಕರು, ಅಂಗವಿಕಲರ ಹಾಗೂ ಹಿರಿಯ ನಾಗರೀಕರ ಕಲ್ಯಾಣ ಇಲಾಖೆ ಇವರು ರಾಜ್ಯದಲ್ಲಿ ಸುಮಾರು 10 ಲಕ್ಷ ಅಂಗವಿಕಲರಿರುವುದರಿಂದ ಈಗ ನೀಡುತ್ತಿರುವ 06 ವೈಯಕ್ತಿಕ ಪ್ರಶಸ್ತಿಗಳು ತುಂಬಾ ಕಡಿಮೆಯಾಗಿದ್ದು, ಅಂಗವಿಕಲ ಸಂಘ ಸಂಸ್ಥೆಗಳಿಂದ ಪ್ರಶಸ್ತಿಗಾಗಿ ಹೆಚ್ಚಿನ ಸಂಖ್ಯೆಯಲ್ಲಿ ಮನವಿಗಳು ಸ್ವೀಕೃತವಾಗುತ್ತಿವೆ ಹಾಗೂ ಅಂಗವಿಕಲರೂ ಸಹ ಉತ್ತಮ ಸಾಧನೆಗಳನ್ನು ವಿವಿಧ ಕ್ಷೇತ್ರಗಳಲ್ಲಿ ಸಾಧಿಸಿ ಸಮಾಜದ ಎಲ್ಲರ ಗಮನವನ್ನು ಸೆಳೆಯುತ್ತಿರುವುದರಿಂದ ಪ್ರಸಕ್ತ ಜಾರಿಯಲ್ಲಿರುವ 06 ವೈಯಕ್ತಿಕ ಪ್ರಶಸ್ತಿಗಳ ಸಂಖ್ಯೆಯನ್ನು 8ಕ್ಕೆ ಹೆಚ್ಚಿಸಿ ವಿವಿಧ ಕ್ಷೇತ್ರಗಳಲ್ಲಿ ಸಾಧನೆಗೈದಂತಹ ಅಂಗವಿಕಲರನ್ನು ಪ್ರೋತ್ಸಾಹಿಸುವುದು ಅವಶ್ಯಕವಾಗಿರುತ್ತದೆ. ಅಲ್ಲದೆ ಸದರಿ ವೆಚ್ಚವನ್ನು ಲೆಕ್ಕಶೀರ್ಷಿಕೆ 2235–02–101–0–99–ಧನಸಹಾಯ ಪರಿಹಾರದಲ್ಲಿ ಲಭ್ಯವಿರುವ ರೂ.279.65 ಲಕ್ಷದಲ್ಲಿ ಭರಿಸುವುದಾಗಿ ತಿಳಿಸುತ್ತಾ ಈ ಬಗ್ಗೆ ಸೂಕ್ತ ಆದೇಶವನ್ನು ಹೊರಡಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಮಮಇ 338 ಪಿಎಚ್‌ಪಿ 2008(ಪಿ), ಬೆಂಗಳೂರು, ದಿನಾಂಕ: 20ನೇ ಫೆಬ್ರವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಲಾದ ಹಿನ್ನೆಲೆಯಲ್ಲಿ ಅಂಗವಿಕಲರ ಕಲ್ಯಾಣಕ್ಕಾಗಿ ವಿಶೇಷವಾಗಿ ಶ್ರಮಿಸಿದ ವ್ಯಕ್ತಿಗೆ ನೀಡಲಾಗುತ್ತಿರುವ 06 ವೈಯಕ್ತಿಕ ಪ್ರಶಸ್ತಿಗಳ: ಸಂಖ್ಯೆಯನ್ನು 08ಕ್ಕೆ ಹೆಚ್ಚಿಸಿ ಮಂಜೂರಾತಿ ನೀಡಲಾಗಿದೆ.

ಈ ಯೋಜನೆಯನ್ನು 2008–09ನೇ ಸಾಲಿನಿಂದ ಜಾರಿಗೊಳಿಸಲಾಗುವುದು. ಮತ್ತು ಈ ವೆಚ್ಚವನ್ನು ಲೆಕ್ಕಶೀರ್ಷಿಕೆ "2235–02–101–0–99 (ಯೋಜನೆ) ಉಪಲೆಕ್ಕಶೀರ್ಷಿಕೆ 100–ಧನಸಹಾಯ ಪರಿಹಾರ"ದಲ್ಲಿ ಲಭ್ಯವಿರುವ ಆಯವ್ಯಯದಲ್ಲಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ನರಸಿಂಹಯ್ಯ**

ಪಿ.ಆರ್. 730

ಸರ್ಕಾರದ ಅಧೀನ ಕಾರ್ಯದರ್ಶಿ–2 (ಪ್ರಭಾರ)
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

**ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ**

**ವಿಷಯ:** ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಕೇಂದ್ರ ಕಛೇರಿಯಲ್ಲಿನ ಮಾಹಿತಿ ಕೇಂದ್ರ ಅಭಿವೃದ್ಧಿಪಡಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 33 ಸ್ವೀಮರ 2008 ದಿ: 14.05.2008.
2. ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ರವರ ಪತ್ರ ಸಂಖ್ಯೆ:ಕಸನಿ/ಮಾಅಬ/17/2007–08, ದಿನಾಂಕ: 05.07.2008.
3. ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ರವರ ಪತ್ರ ಸಂಖ್ಯೆ: ಕಸನಿ/ಮಾಅಬ/17/2007–08, ದಿನಾಂಕ: 27.12.2008.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದ ದಿನಾಂಕ: 14.05.2008ರಲ್ಲಿ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಕೇಂದ್ರ ಕಛೇರಿಯಲ್ಲಿರುವ ಮಾಹಿತಿ ಕೇಂದ್ರ ಅಭಿವೃದ್ಧಿಪಡಿಸಲು ರೂ. 7.00 ಲಕ್ಷಗಳನ್ನು ಒದಗಿಸಿಕೊಡಲಾಗಿರುತ್ತದೆ. ಈ ಸಂಬಂಧ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರು ಮೇಲೆ (2) ರಲ್ಲಿ ಓದಲಾದ ದಿನಾಂಕ: 05.07.2008ರ ಪತ್ರದಲ್ಲಿ ಯೋಜನೆಗೆ ರೂ. 6,15,750ಗಳನ್ನು ಮಂಜೂರು ಮಾಡಬೇಕಾಗಿ ಕೋರಿರುತ್ತಾರೆ.

ಮೇಲೆ (3)ರಲ್ಲಿ ಓದಲಾದ ನಿರ್ದೇಶಕರ ದಿನಾಂಕ: 27.12.2008ರ ಪತ್ರದಲ್ಲಿ ಈ ಯೋಜನೆಯ ಬಗ್ಗೆ ವಿವರವಾದ ಪ್ರಸ್ತಾವನೆಯನ್ನು ಸಲ್ಲಿಸುತ್ತಾ 2008–09ನೇ ಸಾಲಿನ ಲೆಕ್ಕಶೀರ್ಷಿಕೆ 2205–00–102–4–01–015 (ಯೋಜನೆ)ರಡಿ ಒದಗಿಸಲಾಗಿರುವ ರೂ.7.00 ಲಕ್ಷಗಳಲ್ಲಿ ರೂ. 6,15,750ಗಳನ್ನು ಮಂಜೂರು ಮಾಡಬೇಕೆಂದು ಕೋರಿರುತ್ತಾರೆ.

ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 28 ಕಸನಿ 2008, ಬೆಂಗಳೂರು, ದಿನಾಂಕ: 19ನೇ ಫೆಬ್ರವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಕೇಂದ್ರ ಕಛೇರಿಯಲ್ಲಿನ ಮಾಹಿತಿ ಕೇಂದ್ರ ಅಭಿವೃದ್ಧಿಪಡಿಸಲು ಈ ಕೆಳಕಂಡ ಷರತ್ತಿಗೊಳಪಟ್ಟು, ರೂ.6,15,750ಗಳನ್ನು (ರೂಪಾಯಿ ಆರು ಲಕ್ಷದ ಹದಿನೈದು ಸಾವಿರದ ಏಳುನೂರ ಐವತ್ತು ಮಾತ್ರ) ನಿರ್ದೇಶಕರು ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಬೆಂಗಳೂರು ಇವರಿಗೆ ಬಿಡುಗಡೆ ಮಾಡಲು ಸರ್ಕಾರದ ಅನುಮತಿ ನೀಡಲಾಗಿದೆ:

1) ಹಣವನ್ನು ಯಾವ ಉದ್ದೇಶಕ್ಕೆ ಬಿಡುಗಡೆ ಮಾಡಿದೆಯೋ ಅದೇ ಉದ್ದೇಶಕ್ಕೆ ಬಳಸತಕ್ಕದ್ದು.
2) ಹಣ ಬಳಕೆಯಾದ ಬಗ್ಗೆ ಹಣಬಳಕೆ ಪ್ರಮಾಣಪತ್ರವನ್ನು ಸಲ್ಲಿಸುವುದು.
3) ಈ ಕಾಮಗಾರಿಯನ್ನು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕ ಕಾಯ್ದೆ 1999 ಮತ್ತು ಅದರ ನಿಯಮಗಳು 2000ನ್ನು ಅನುಸರಿಸಿ ಕ್ರಮ ವಹಿಸುವುದು.
4) ಈ ಯೋಜನೆಗೆ ತಾಂತ್ರಿಕ ಸಲಹಾ ಸಮಿತಿಯಲ್ಲಿ ಅನುಮೋದನೆ ಪಡೆದು ನಂತರ ಉದ್ದೇಶಿಸಿರುವ ಸ್ಕ್ಯಾನರ್, ಕಲರ್ ಪ್ರಿಂಟರ್, ಗಣಕಯಂತ್ರವನ್ನು ಖರೀದಿಸಲು ಸರ್ಕಾರ ನಿಗಧಿಪಡಿಸಿದ ಅಂಗೀಕೃತಗೊಂಡಿರುವ ಸಂಸ್ಥೆಯಿಂದ ಡಿ.ಜಿ.ಎಸ್ ಅಂಡ್ ಡಿ ದರದಲ್ಲಿ ಖರೀದಿ ಮಾಡುವುದು ಹಾಗೂ ಇ–ಆಡಳಿತದ ಕ್ರಿಯಾಯೋಜನೆಯಲ್ಲಿ ಸೇರಿಸಲು ಕ್ರಮ ಕೈಗೊಳ್ಳುವುದು.

ಈ ವೆಚ್ಚವನ್ನು 2008–09ನೇ ಸಾಲಿನ ಲೆಕ್ಕಶೀರ್ಷಿಕೆ 2205–00–102–4–01–015 (ಯೋಜನೆ)ರಡಿ ಭರಿಸತಕ್ಕದ್ದು.

ಈ ಆದೇಶವನ್ನು ದಿನಾಂಕ: 31.01.2009ರ ಟಿಪ್ಪಣಿ ಸಂಖ್ಯೆ ಇಡಿ 232 ಐಎಫ್ (ಬಿಎ) 2009ರಲ್ಲಿ ಆಂತರಿಕ ಆರ್ಥಿಕ ಸಲಹೆಗಾರರು ನೀಡಿದ ಸಹಮತಿನ್ವಯ ಮತ್ತು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 1996 ದಿ:10.07.1996 ರನ್ವಯ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುಕ್ಮಿಣಿ ದಿವಾಕರ್**

ಪಿ.ಆರ್. 731 ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ) (ಪ್ರ).

**ವಿಷಯ:** 2008–09ನೇ ಸಾಲಿನ ಮಾಣಿಕ್ಯವೇಲು ಮ್ಯಾನ್‌ಷನ್ ಕಟ್ಟಡದ ಬಾಡಿಗೆ ಹಣವನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರ ಪತ್ರ ಸಂಖ್ಯೆ: ಕಸನಿ 65 ಮಾಣಿಕ್ಯವೇ 2008–09 ದಿನಾಂಕ: 26.08.2008.

**ಪ್ರಸ್ತಾವನೆ:**

ನ್ಯಾಷನಲ್ ಗ್ಯಾಲರಿ ಆಫ್ ಮಾರ್ಡನ್ ಆರ್ಟ್ ಸಂಸ್ಥೆಗೆ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ವತಿಯಿಂದ 30 ವರ್ಷಗಳ ಅವಧಿಗೆ ಗುತ್ತಿಗೆಗೆ ನೀಡಲಾಗಿದ್ದು ಇದರ ಬಾಡಿಗೆಯನ್ನು ಕರ್ನಾಟಕ ಗೃಹ ಮಂಡಳಿಗೆ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ವತಿಯಿಂದ ಪಾವತಿಸುತ್ತಿರುವ ಕಾರಣ ಪ್ರತಿ ಸಾಲಿನಂತೆ 2008–09ನೇ ಸಾಲಿಗೂ ಸಹ ಈ ಕಟ್ಟಡದ ಬಾಡಿಗೆ ಮೊತ್ತ ರೂ.30,91,812/– ಗಳನ್ನು ಕರ್ನಾಟಕ ಗೃಹ ಮಂಡಳಿಗೆ ಪಾವತಿಸಲು ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು ಅವರು ಮೇಲೆ ಓದಲಾದ ಪತ್ರದಲ್ಲಿ ಸರ್ಕಾರದ ಮಂಜೂರಾತಿ ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಸಂಖ್ಯೆ: ಕಸಂವಾಪ್ರ 120 ಕಸನಿ 2008, ಬೆಂಗಳೂರು, ದಿನಾಂಕ: 19ನೇ ಫೆಬ್ರವರಿ 2009**

ಬೆಂಗಳೂರು ಅರಮನೆ ರಸ್ತೆಯಲ್ಲಿರುವ ಮಾಣಿಕ್ಯವೇಲು ಮ್ಯಾನ್‌ಷನ್ ಕಟ್ಟಡದ 2008–09ನೇ ಸಾಲಿನ ಬಾಡಿಗೆ ಮೊತ್ತ ರೂ. 30,91,812/– (ರೂಪಾಯಿ ಮೂವತ್ತು ಲಕ್ಷದ ತೊಂಬತ್ತೊಂದು ಸಾವಿರದ ಎಂಟುನೂರ ಹನ್ನೆರಡು ಮಾತ್ರ) ಗಳನ್ನು ಕರ್ನಾಟಕ ಗೃಹಮಂಡಳಿಗೆ ಪಾವತಿಸಲು ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರಿಗೆ ಈ ಮೂಲಕ ಸರ್ಕಾರದ ಮಂಜೂರಾತಿ ನೀಡಲಾಗಿದೆ. ಇದಕ್ಕೆ ತಗಲುವ ವೆಚ್ಚವನ್ನು 2008–09ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2205–00–001–0–01–071 ಕಟ್ಟಡ ವೆಚ್ಚಗಳು (ಯೋಜನೇತರ) ಇದರಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಸಹಮತಿಯನ್ನು ಟಿಪ್ಪಣಿ ಸಂಖ್ಯೆ: ಇಡಿ 234 ಐಎಫ್ (ಬಿಎ) 2009, ದಿನಾಂಕ: 02.02.2009ರಲ್ಲಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುಕ್ಮಿಣಿ ದಿವಾಕರ್**

ಪಿ.ಆರ್. 732 ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ) (ಪ್ರ).

**ವಿಷಯ:** ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆಯ ಸಹಭಾಗಿತ್ವದಲ್ಲಿ ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಧರ್ಮೋತ್ಥಾನ ಟ್ರಸ್ಟ್ ವತಿಯಿಂದ ಪ್ರಾಚೀನ ಮತ್ತು ಐತಿಹಾಸಿಕ ಸ್ಮಾರಕಗಳ ಸಂರಕ್ಷಣೆ – 2008–09ನೇ ಆರ್ಥಿಕ ಸಾಲಿನ 7ನೇ ಹಂತದ ಕ್ರಿಯಾ ಯೋಜನೆಗೆ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 33 ಸ್ವೀಮರ 2008 ದಿನಾಂಕ: 14.05.2008.
2. ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಅವರ ಪತ್ರ ಸಂಖ್ಯೆ: ಡಿಎಎಂ:ಎಸಿಟಿ6:127:2008–09 ದಿನಾಂಕ: 18.11.2008.

**ಪ್ರಸ್ತಾವನೆ:**

ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆಯ 2008–09ನೇ ಸಾಲಿನ ಯೋಜನೇತರ ಕಾರ್ಯಕ್ರಮಗಳಿಗೆ ಅನುಮೋದನೆ ನೀಡಿ ಹೊರಡಿಸಲ್ಪಟ್ಟ, ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಖಾಸಗಿ ಸಹಭಾಗಿತ್ವದೊಂದಿಗೆ ಸ್ಮಾರಕಗಳ ಸಂರಕ್ಷಣೆ ಸಂಬಂಧ ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಧರ್ಮೋತ್ಥಾನ ಟ್ರಸ್ಟ್ ವತಿಯಿಂದ ಕೈಗೊಳ್ಳುವ ಕಾರ್ಯಕ್ರಮಕ್ಕಾಗಿ ರೂ. 40.00 ಲಕ್ಷಗಳನ್ನು ನಿಗದಿಪಡಿಸಲಾಗಿದೆ. ನಿರ್ದೇಶಕರು ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಅವರು ಮೇಲೆ (2)ರಲ್ಲಿ ಓದಲಾದ ಅವರ ಪತ್ರದಲ್ಲಿ ಇಲಾಖೆಯ ಸಹಭಾಗಿತ್ವದೊಡನೆ ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಧರ್ಮೋತ್ಥಾನ ಟ್ರಸ್ಟ್ ಇವರು 2008–09ನೇ ಸಾಲಿನಲ್ಲಿ ಸ್ಮಾರಕಗಳ ಸಂರಕ್ಷಣೆಗಾಗಿ ಕೈಗೊಳ್ಳುವ 7ನೇ ಹಂತದ ಕ್ರಿಯಾಯೋಜನೆಗೆ ರೂ. 40.00 ಲಕ್ಷಗಳನ್ನು (ರೂಪಾಯಿ ನಲವತ್ತು ಲಕ್ಷಗಳು ಮಾತ್ರ) ಬಿಡುಗಡೆ ಮಡುವಂತೆ ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 232 ಕೆಎಂಯು 2008, ಬೆಂಗಳೂರು, ದಿನಾಂಕ: 20ನೇ ಫೆಬ್ರವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳಿಂದಾಗಿ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆಯ ಸಹಭಾಗಿತ್ವದಲ್ಲಿ ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಧರ್ಮೋತ್ಥಾನ ಟ್ರಸ್ಟ್ 2008–09ನೇ ಸಾಲಿನಲ್ಲಿ ಕೈಗೊಳ್ಳುವ ರಾಜ್ಯದ ಪ್ರಾಚೀನ ಮತ್ತು ಐತಿಹಾಸಿಕ ಸ್ಮಾರಕಗಳ ಸಂರಕ್ಷಣೆಯ 7ನೇ ಹಂತದ ಕ್ರಿಯಾಯೋಜನೆಗಾಗಿ ರೂ.40.00 ಲಕ್ಷ (ರೂ.ನಲವತ್ತು ಲಕ್ಷ ಮಾತ್ರ)ಗಳನ್ನು ನಿರ್ದೇಶಕರು, ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಧರ್ಮೋತ್ಥಾನ ಟ್ರಸ್ಟ್ ಅವರಿಗೆ ಪೇಯಿಸ್ ರಸೀತ್ ಮೂಲಕ ಬಿಡುಗಡೆ ಮಾಡಲು ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಅವರಿಗೆ ಈ ಮೂಲಕ ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಇದಕ್ಕೆ ತಗಲುವ ವೆಚ್ಚವನ್ನು 2008–09ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2205–00–103–0–01 (ಯೋಜನೇತರ) 059 ಇತರೆ ಖರ್ಚು ಇದರಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ ಇಡಿ 20/ಐಎಫ್(ಬಿಎ) 2009 ದಿನಾಂಕ: 12.01.2009 ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ:10.07.96ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುಕ್ಮಿಣಿ ದಿವಾಕರ್**

ಪಿ.ಆರ್. 733 ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ) (ಪ್ರ).

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ:** ಜೂಟು ರೇಷ್ಮೆ ಗಿರಣಿ, ಚನ್ನಪಟ್ಟಣಕ್ಕೆ ಸಂಬಂಧಪಟ್ಟಂತೆ ಕರ್ನಾಟಕ ಗೃಹ ಮಂಡಳಿಯವರು ಕಟ್ಟಿಸಿರುವ 46 ಮನೆಗಳನ್ನು ವಿತರಣೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಅಧ್ಯಕ್ಷರು ಮತ್ತು ವ್ಯವಸ್ಥಾಪಕ ನಿರ್ದೇಶಕರು ಇವರ ಪತ್ರ ಸಂಖ್ಯೆ: KSIC/KHBQ/2007-08/1360, ದಿನಾಂಕ: 3.10.2006, 23.5.2007, 10.03.2008, 26.09.2008 ಹಾಗೂ 12.1.2009.
2. ದಿನಾಂಕ: 4.3.2007 ರಂದು ನಡೆದ ಕರ್ನಾಟಕ ರೇಷ್ಮೆ ಉದ್ಯಮಗಳ ನಿಗಮ ನಿಯಮಿತದ ನಿರ್ದೇಶಕರ ಮಂಡಳಿಯ ಸಭೆಯ ನಡವಳಿಗಳು.
3. ಸರ್ಕಾರದ ಕಾರ್ಯದರ್ಶಿರವರ ಅಧ್ಯಕ್ಷತೆಯಲ್ಲಿ ದಿನಾಂಕ: 5.12.2008 ರಂದು ನಡೆದ ಸಭೆಯ ನಡವಳಿ.

**ಪ್ರಸ್ತಾವನೆ:**

1956–57ರಲ್ಲಿ ಮೈಸೂರು ಗೃಹ ಮಂಡಳಿ ಸಂಸ್ಥೆಯು ಅಂದಿನ ಮೈಸೂರು ಸ್ಪನ್ ಸಿಲ್ಕ್ ಮಿಲ್ಸ್‌ಗೆ ಸಂಬಂಧಿಸಿದ ಚನ್ನಪಟ್ಟಣದ ಮಂಗಳವಾರ ಪೇಟೆಗೆ ಹೊಂದಿಕೊಂಡಂತೆ ಇದ್ದ ನಿವೇಶನದಲ್ಲಿ ಕೇಂದ್ರ ಸರ್ಕಾರದ ವಸತಿ ಯೋಜನೆಯಡಿಯಲ್ಲಿ 46 ಮನೆಗಳನ್ನು ಕಟ್ಟಿಸಿ ಮೈಸೂರು ಸ್ಪನ್ ಸಿಲ್ಕ್ ಮಿಲ್‌ಗೆ ನೀಡಿದ್ದರು. ಮೈಸೂರು ಸ್ಪನ್ ಸಿಲ್ಕ್ ಮಿಲ್ ಮತ್ತು ಮೈಸೂರು ಗೃಹ ಮಂಡಳಿಯ ಒಪ್ಪಂದ ಪ್ರಕಾರ ಈ ಗೃಹಗಳನ್ನು ಮೈಸೂರು ಸ್ಪನ್ ಸಿಲ್ಕ್ ಮಿಲ್‌ಗೆ ನೀಡಿದ್ದು, ಅಲ್ಲಿನ ಕಾರ್ಮಿಕರಿಗೆ ವಾಸ ಮಾಡಲು ಹಂಚಿಕೆ ಮಾಡಲಾಗಿತ್ತು. 1959–60 ರಲ್ಲಿ ಮೈಸೂರು ಸ್ಪನ್ ಮಿಲ್ ಲಿಕ್ವಿಡೇಡ್ ಆಗಿದ್ದು, ಸದರಿ ಮಿಲ್‌ನ್ನು ಸರ್ಕಾರವು ಖರೀದಿಸಿರುತ್ತದೆ. ಸರ್ಕಾರಿ ಆದೇಶ ಸಂಖ್ಯೆ: ಸಿಐ 36 ಸಿಟಿಎಕ್ಸ್ 81, ದಿನಾಂಕ: 31.8.1981 ರಲ್ಲಿ ಸರ್ಕಾರದ ಸ್ವಾಮ್ಯದಲ್ಲಿದ್ದ ಸರ್ಕಾರಿ ಸ್ಪನ್ ಸಿಲ್ಕ್ ಮಿಲ್‌ನ್ನು ಕರ್ನಾಟಕ ರೇಷ್ಮೆ ಉದ್ಯಮಗಳ ನಿಗಮದ ವಶಕ್ಕೆ ಎಲ್ಲಿ ಹೇಗಿದೆಯೋ ಹಾಗೆ ಆಧಾರದಲ್ಲಿ ನೀಡಲಾಗಿರುತ್ತದೆ. ಅದರಂತೆ ಸ್ಪನ್ ಸಿಲ್ಕ್ ಮಿಲ್‌ಗೆ ಸೇರಿದ ಎಲ್ಲಾ ಚರ–ಸ್ಥಿರಾಸ್ತಿಗಳು ಕರ್ನಾಟಕ ರೇಷ್ಮೆ ಉದ್ಯಮಗಳ ನಿಗಮಕ್ಕೆ ವರ್ಗವಣೆ ಆಗಿರುತ್ತದೆ.

ಕರ್ನಾಟಕ ಗೃಹ ಮಂಡಳಿಗೆ ಈ ಮನೆಗಳ ಬಾಬ್ತು ರೂ. 7,75,977/–ಗಳನ್ನು ಕರ್ನಾಟಕ ರೇಷ್ಮೆ ಉದ್ಯಮಗಳ ನಿಗಮವು ಪಾವತಿಸಿದಲ್ಲಿ ಈಗ ಇರುವ ಹಾಲಿ ವಾಸಿಗರಿಗೆ ಹಂಚಿಕೆ ಮಾಡಬಹುದೆಂದು ಕರ್ನಾಟಕ ಗೃಹ ಮಂಡಳಿಯು ನಿಗಮಕ್ಕೆ ತಿಳಿಸಿರುತ್ತದೆ. ಈ ಹಿನ್ನೆಲೆಯಲ್ಲಿ ಈ ಮನೆಗಳನ್ನು ಕಟ್ಟಲು ಆಗಿರುವ ವೆಚ್ಚ, ಮನೆಯ ಬೆಲೆ, ನಿವೇಶನದ ಬೆಲೆಯ ವಿವರಗಳನ್ನು ತಿಳಿಸಿ ಅದನ್ನು ಅಲ್ಲಿಯ ನಿವಾಸಿಗರಿಗೆ ಹಂಚಿಕೆ ಮಾಡುವ ಕುರಿತಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ: 3.10.2006ರ ಪತ್ರದಲ್ಲಿ, ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರೇಷ್ಮೆ ಉದ್ಯಮಗಳ ನಿಗಮ ನಿಯಮಿತ ಇವರು ಸರ್ಕಾರಕ್ಕೆ ಪ್ರಸ್ತಾವನೆ ಕಳುಹಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ವಿಷಯವನ್ನು ಮಂಡಳಿಯ ನಿರ್ದೇಶಕರ ಸಭೆಯಲ್ಲಿ ಚರ್ಚಿಸಿ ತೀರ್ಮಾನ ತೆಗೆದುಕೊಳ್ಳುವಂತೆ ಸರ್ಕಾರದಿಂದ ನಿಗಮಕ್ಕೆ ತಿಳಿಸಲಾಯಿತು. ಅದರಂತೆ ವಿಷಯವನ್ನು ಕರ್ನಾಟಕ ರೇಷ್ಮೆ ಉದ್ಯಮಗಳ ನಿಗಮದ ನಿರ್ದೇಶಕರ ಮಂಡಳಿಯ ಸಭೆಯಲ್ಲಿ ಇಟ್ಟು ಚರ್ಚಿಸಿ ಸದರಿ ಸಭೆಯಲ್ಲಿ ಚನ್ನಪಟ್ಟಣದ ರೇಷ್ಮೆ ಜೂಟು ಕಾರ್ಖಾನೆಯ ಮಂಗಳವಾರ ಪೇಟೆಯಲ್ಲಿ ಹೊಂದಿರುವ ವಸತಿಗೃಹಗಳನ್ನು ಅಲ್ಲಿ ಸೇವೆ ಸಲ್ಲಿಸಿದ ಹಂಚಿಕೆದಾರ ನೌಕರರಿಗೆ ರಿಯಾಯಿತಿ ದರದಲ್ಲಿ ಪ್ರತಿ ಚದರ ಅಡಿಗೆ ರೂ. 60/–ರಂತೆ ನೀಡಲು ತೀರ್ಮಾನಿಸಿ ಈ ಬಗ್ಗೆ ಸರ್ಕಾರಕ್ಕೆ ಅದರಂತೆ ಶಿಫಾರಸ್ಸು ಮಾಡಲು ತೀರ್ಮಾನಿಸಿರುವುದನ್ನು ತಿಳಿಸಿರುತ್ತಾರೆ. ಚನ್ನಪಟ್ಟಣದ ಜೂಟು ರೇಷ್ಮೆ ಗಿರಣಿಗೆ ಸಂಬಂಧಿಸಿದ 46 ವಸತಿ ಗೃಹಗಳನ್ನು ನಿರ್ದೇಶಕ ಮಂಡಳಿಯ ತೀರ್ಮಾನದಂತೆ ಹಂಚಿಕೆದಾರರಿಗೆ ಮಾರಾಟ ಮಾಡುವುದಕ್ಕೆ ಸರ್ಕಾರದ ಅನುಮೋದನೆ ನೀಡುವಂತೆ ಮತ್ತು ಈ ಬಗ್ಗೆ ಅಗತ್ಯ ಕ್ರಮ ಕೈಗೊಳ್ಳಲು ವ್ಯವಸ್ಥಾಪಕ ನಿರ್ದೇಶಕರನ್ನು ಅಧಿಕರಿಸುವಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ: 23.5.2007ರ ಪತ್ರದಲ್ಲಿ ಅಧ್ಯಕ್ಷರು ಮತ್ತು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರೇಷ್ಮೆ ಉದ್ಯಮಗಳ ನಿಗಮ ನಿಯಮಿತ ಇವರು ಸರ್ಕಾರವನ್ನು ಕೋರಿರುತ್ತಾರೆ.

ಸರ್ಕಾರದ ಹಂತದಲ್ಲಿ ವಿಷಯವನ್ನು ಕುರಿತಂತೆ ಪರಿಶೀಲಿಸಿ ದಿನಾಂಕ: 5.12.2008 ರಂದು ಈ ಬಗ್ಗೆ ಸಭೆ ನಡೆಸಿ ವಿಷಯವನ್ನು ಕೂಲಂಕಷವಾಗಿ ಚರ್ಚಿಸಿ ಈ ಹಿಂದೆ ರೇಷ್ಮೆ ಖಾತೆಯ ಉಸ್ತುವಾರಿ ಹೊಂದಿದ್ದ ಯೋಜನೆ, ಸಣ್ಣ ಉಳಿತಾಯ, ವಿಜ್ಞಾನ ಮತ್ತು ತಂತ್ರಜ್ಞಾನ ಹಾಗೂ ರೇಷ್ಮೆ ಸಚಿವರು ನಿವೇಶನ ಬೆಲೆ ಚದರಡಿ ರೂ. 80/– ರಂತೆ ಹಾಗೂ ಪ್ರತಿಯೊಂದು ಮನೆಯ ಬೆಲೆ ರೂ. 3500/– ರಂತೆ ನಿಗದಿಪಡಿಸಿದ್ದ ದರದಲ್ಲಿ ಮನೆಗಳನ್ನು ಈಗ ಹಾಲಿ ವಾಸಿಸುತ್ತಿರುವ ಹಂಚಿಕೆದಾರರಿಗೆ ಮಾರಾಟ ಮಾಡಲು ಹಾಗೂ ಸದರಿ ವಸತಿ ಗೃಹಗಳಲ್ಲಿ ನಿಗಮದ ಕಾರ್ಮಿಕರೇ ವಾಸಿಸುತ್ತಿರುವರೆಂಬ ಬಗ್ಗೆ ಮನದಟ್ಟುಮಾಡಿಕೊಳ್ಳಲು ನಿಗಮದ ಕಾನೂನು ಸಲಹೆಗಾರರ ಸಲಹೆಯನ್ನು ಅವಶ್ಯಕವಾಗಿ ಪಡೆದು ನಿಯಮಾನುಸಾರ ಮನೆಯನ್ನು ಹಂಚಿಕೆ ಮಾಡಬೇಕೆಂದು ಸಭೆಯು ತೀರ್ಮಾನಿಸಿತು. ಸದರಿ ಸಭೆಯ ತೀರ್ಮಾನದನ್ವಯ ಮುಂದಿನ ಕ್ರಮ ತೆಗೆದುಕೊಳ್ಳಲು ಆದೇಶ ಹೊರಡಿಸುವಂತೆ ಅಧ್ಯಕ್ಷರು ಮತ್ತು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರೇಷ್ಮೆ ಉದ್ಯಮಗಳ ನಿಗಮ ನಿಯಮಿತ ಇವರು ಮೇಲೆ ಓದಲಾದ ಕ್ರಮಸಂಖ್ಯೆ (1)ರ ದಿನಾಂಕ: 12.1.2009ರ ಪತ್ರದಲ್ಲಿ ಕೋರಿರುತ್ತಾರೆ. ಸಭೆಯ ನಡವಳಿಯನ್ವಯ ಕ್ರಮ ತೆಗೆದುಕೊಳ್ಳಲು ತೀರ್ಮಾನಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 63 ರೇಉನಿ 2006, ಬೆಂಗಳೂರು, ದಿನಾಂಕ: 28ನೇ ಫೆಬ್ರವರಿ 2009**

ಚನ್ನಪಟ್ಟಣದ ಜೂಟು ರೇಷ್ಮೆ ಗಿರಣಿಗೆ ಸಂಬಂಧಿಸಿದಂತೆ ಕರ್ನಾಟಕ ಗೃಹ ಮಂಡಳಿಯವರು ಕಟ್ಟಿಸಿದ್ದ 46 ಮನೆಗಳನ್ನು ನಿವೇಶನ ಬೆಲೆ ಚದರಡಿಗೆ ರೂ. 80/– ರಂತೆ ಹಾಗೂ ಪ್ರತಿಯೊಂದು ಮನೆಯ ಬೆಲೆ ರೂ. 3500/– ರಂತೆ ನಿಗದಿಪಡಿಸಿರುವಂತೆ ದರದಲ್ಲಿ ಸದರಿ ಮನೆಗಳನ್ನು ಹಾಲಿ ವಸತಿ ಗೃಹಗಳಲ್ಲಿ ವಾಸಿಸುತ್ತಿರುವ ಹಂಚಿಕೆದಾರರಿಗೆ ಸದರಿ ವಸತಿ ಗೃಹಗಳಲ್ಲಿ ಕರ್ನಾಟಕ ರೇಷ್ಮೆ ಉದ್ಯಮಗಳ ನಿಗಮ ನಿಯಮಿತದ ಕಾರ್ಮಿಕರೇ ವಾಸಿಸುತ್ತಿರುವರೆಂಬ ಬಗ್ಗೆ ಅಧಿಕೃತವಾಗಿ ದಾಖಲೆ ಪ್ರಕಾರ ಮನದಟ್ಟು ಮಾಡಿಕೊಂಡು ನಿಗಮದ ಕಾನೂನು ಸಲಹೆಗಾರರ ಸಲಹೆಯನ್ನು ಸಹ ಅವಶ್ಯಕವಾಗಿ ಪಡೆದು ಕರ್ನಾಟಕ ರೇಷ್ಮೆ ಉದ್ಯಮಗಳ ನಿಗಮ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ನಿಯಮಾನುಸಾರ ಮನೆಗಳನ್ನು ಹಂಚಿಕೆ ಮಾಡುವುದಕ್ಕೆ ಅನುಮೋದನೆ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 777

**ಭಾರತಿ ಆರ್. ನಾಯಕ್**

ಪೀಠಾಧಿಕಾರಿ (ರೇಷ್ಮೆ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಅಬ್ದುಲ್ ರಹೀಂ, ಕೆ.ಎ.ಎಸ್. (ನಿವೃತ್ತ) ಅಧಿಕಾರಿ ಇವರ ವಿರುದ್ಧ ಇಲಾಖಾ ವಿಚಾರಣೆ–ಆರೋಪಮುಕ್ತರನ್ನಾಗಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ–ಆದೇಶ.

**ಓದಲಾಗಿದೆ:**
1. ಮಾನ್ಯ ಉಪ ಲೋಕಾಯುಕ್ತ ಪತ್ರ ಸಂ:ಕಂಪ್ಲೆಂಟ್:ಉಪಲೋಕ್ ಬಿಸಿಡಿ–100/2004 ದಿನಾಂಕ: 04.01.06.
2. ಸರ್ಕಾರಿ ಆದೇಶ ಸಂ: ಸಿಆಸುಇ 139 ಎಸ್‌ಇಎನ್ 05 ದಿ:14.03.06.
3. ವಿಚಾರಣಾ ವರದಿ ಸಂ: ಲೋಕ್:ಎಆರ್‌ಇ–4 ಇಎನ್‌ಕ್ಯೂ–26 2007 ದಿ:27.10.07.
4. ಸನ್ಮಾನ್ಯ ಉಪಲೋಕಾಯುಕ್ತರ ಪತ್ರ ಸಂ: ಲೋಕ್:ಎಆರ್‌ಇ–4 ಇಎನ್‌ಕ್ಯೂ–26 2007 ದಿನಾಂಕ:12.12.2007.
5. ಸನ್ಮಾನ್ಯ ಉಪಲೋಕಾಯುಕ್ತರ ಪತ್ರ ಸಂ: ಲೋಕ್:ಎಆರ್‌ಇ–4 ಇಎನ್‌ಕ್ಯೂ–26 2007 ದಿನಾಂಕ:22.01.08.

**ಪ್ರಸ್ತಾವನೆ:**

ಶ್ರೀ ಅಬ್ದುಲ್ ರಹೀಂ, ಕೆ.ಎ.ಎಸ್ (ನಿ) ಅಧಿಕಾರಿ ರವರು ವಿಶೇಷ ಭೂಸ್ವಾಧೀನಾಧಿಕಾರಿ ಹಾಗೂ ಸಕ್ಷಮ ಪ್ರಾಧಿಕಾರಿ ಕಛೇರಿ ನೆಲಮಂಗಲ–ತುಮಕೂರು ರಸ್ತೆ ರಾ.ಹೆ.4 ಬೆಂಗಳೂರು ಇಲ್ಲಿ ವಿಶೇಷ ಭೂಸ್ವಾಧೀನಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ ತುಮಕೂರು ತಾ: ಊರ್ಡಿಗೆರೆ ಹೋಬಳಿ ಹಿರೇಹಳ್ಳಿ ಗ್ರಾಮದ ಸ.ಸಂ.42/2 ರಲ್ಲಿ 13 ಗುಂಟೆ ಜಮೀನನ್ನು ರಾಷ್ಟ್ರೀಯ ಹೆದ್ದಾರಿ–4 ರ ವಿಸ್ತರಣೆಗಾಗಿ ಭೂಸ್ವಾಧೀನ ಪಡಿಸಿಕೊಂಡ ಭೂಸ್ವಾಧೀನ ಪರಿಹಾರಧನ ಪಾವತಿಸುವ ಸಂಬಂಧದಲ್ಲಿ ಶ್ರೀ ಸಿ.ವಿ. ಹೊಸಳಯ್ಯ ಮತ್ತು ಶ್ರೀ ಸಿ.ವಿ. ಶಿವಣ್ಣ s/o ದಿ: ವೀರಣ್ಣ ಎಂಬುವರಿಗೆ ಭೂಪರಿಹಾರಧನ ರೂ.53,106.00 ನ್ನು ನೀಡುವ ಬದಲು ಶ್ರೀ ಹೊಸಳಯ್ಯ ಬಿನ್ ಗಂಗಹೊಸಳಯ್ಯ ಎಂಬುವರಿಗೆ ಪಾವತಿ ಮಾಡಿ ಅಧಿಕಾರ ದುರುಪಯೋಗ ಪಡಿಸಿಕೊಂಡಿದ್ದಾರೆಂದು ಶ್ರೀ ಸಿ.ವಿ. ಹೊಸಳಯ್ಯ ಮತ್ತು ಶ್ರೀ ಸಿ.ವಿ. ಶಿವಣ್ಣ s/o ದಿ: ವೀರಣ್ಣ ರವರು ಸದರಿ ಅಧಿಕಾರಿ ರವರ ವಿರುದ್ಧ ಸಲ್ಲಿಸಿದರು. ಅದರಂತೆ ಈ ದೂರಿನ ಬಗ್ಗೆ ಸನ್ಮಾನ್ಯ ಉಪ ಲೋಕಾಯುಕ್ತರು ತನಿಖೆ ನಡೆಸಿ ಮೇಲೆ ಓದಲಾದ ಕ್ರಮ ಸಂಖ್ಯೆ (1) ರಲ್ಲಿ ಲೋಕಾಯುಕ್ತ ಕಾಯ್ದೆ 1984ರ ಕಲಂ 12(3)ರಡಿಯ ತಮ್ಮ ವರದಿಯಲ್ಲಿ ಸದರಿ ಅಧಿಕಾರಿಯವರ ವಿರುದ್ಧ ಮಾಡಿರುವ ಆರೋಪವು ಮೇಲ್ನೋಟಕ್ಕೆ ಸತ್ಯವೆಂದು ತಿಳಿಸಿ ಅವರ ವಿರುದ್ಧ ಪೂರ್ಣ ಪ್ರಮಾಣದ ತನಿಖೆಗಾಗಿ ಸಿ.ಸಿ.ಎ. ನಿಯಮ 14–ಎ ರಡಿ ತಮಗೆ ವಹಿಸುವಂತೆ ಶಿಫಾರಸ್ಸು ಮಾಡಿದ್ದರು. ಅದರಂತೆ ಮೇಲೆ ಕ್ರಮ ಸಂ:(2)ರಲ್ಲಿ ಓದಲಾದ ಆದೇಶದಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 14–ಎ ರನ್ವಯ ಶ್ರೀ ಅಬ್ದುಲ್ ರಹೀಂ ವಿರುದ್ಧ ವಿಚಾರಣೆ ನಡೆಸಲು ಸನ್ಮಾನ್ಯ ಉಪಲೋಕಾಯುಕ್ತರಿಗೆ ವಹಿಸಲಾಗಿತ್ತು. ಸನ್ಮಾನ್ಯ ಉಪಲೋಕಾಯುಕ್ತರಿಂದ ವಿಚಾರಣಾಧಿಕಾರಿಯಾಗಿ ನೇಮಕಗೊಂಡ ಅಪರ ನಿಬಂಧಕರು ವಿಚಾರಣೆ–4 ಕರ್ನಾಟಕ ಲೋಕಾಯುಕ್ತ ರವರು ವಿಚಾರಣೆ ನಡೆಸಿ ಮೇಲೆ ಓದಲಾದ ಕ್ರಮ ಸಂ:(3)ರಲ್ಲಿ ವಿಚಾರಣಾ ವರದಿಯನ್ನು ಸನ್ಮಾನ್ಯ ಉಪಲೋಕಾಯುಕ್ತರಿಗೆ ಸಲ್ಲಿಸಿ ಆರೋಪಿತ ಅಧಿಕಾರಿ ಮೇಲೆ ಹೊರಿಸಿದಂತಹ ಆರೋಪವು ಸಾಬೀತಾಗಿರುವುದಾಗಿ ತಿಳಿಸಿರುತ್ತಾರೆ. ಸದರಿ ವರದಿಯನ್ನು ಪರಾಮರ್ಶಿಸಿದ ಸನ್ಮಾನ್ಯ ಉಪಲೋಕಾಯುಕ್ತರು ಮೇಲೆ ಓದಲಾದ ಕ್ರಮ ಸಂ.(4)ರ ಪತ್ರದಲ್ಲಿ ಆಪಾದಿತ ಅಧಿಕಾರಿಯ ವಿರುದ್ಧ ಹೊರಿಸಲಾದ ಆರೋಪವು ಸಾಬೀತಾಗಿರುವುದರಿಂದ ಕೆ.ಸಿ.ಎಸ್.(ಸಿ.ಸಿ.ಎ) ನಿಯಮ 1957ರ ನಿಯಮ 8(iii) ರ ಪ್ರಕಾರ ಇವರ ಮೂರು ವಾರ್ಷಿಕ ವೇತನ ಬಡ್ತಿ (ಸಂಚಿತ ಪರಿಣಾಮ ಬೀರುವಂತೆ) ಹಾಗೂ ನಿಯಮ 8(iii-a) ರ ಪ್ರಕಾರ ಎರಡು ವರ್ಷ ಬಡ್ತಿ ತಡೆಯುವ ದಂಡನೆಯನ್ನು ವಿಧಿಸಲು ಶಿಫಾರಸ್ಸು ಮಾಡಿದ್ದರು. ಆದರೆ ಸನ್ಮಾನ್ಯ ಉಪ ಲೋಕಾಯುಕ್ತರವರಿಂದ ಶಿಫಾರಸ್ಸು ಬರುವ ಮುನ್ನವೇ ಸದರಿ ಅಧಿಕಾರಿಯು ಸೇವೆಯಿಂದ ವಯೋ ನಿವೃತ್ತಿ ಹೊಂದಿದ್ದ ಕಾರಣ, ಉಪಲೋಕಾಯುಕ್ತರು ಶಿಫಾರಸ್ಸು ಮಾಡಿದ ದಂಡನೆಯನ್ನು ವಿಧಿಸಲು ಸಾಧ್ಯವಾಗದೆಂಬ ಅಂಶವನ್ನು ಉಪಲೋಕಾಯುಕ್ತರ ಗಮನಕ್ಕೆ ತಂದ ನಂತರ, ಮಾನ್ಯ ಉಪ ಲೋಕಾಯುಕ್ತರು ಮೇಲೆ ಓದಲಾದ ಕ್ರಮ ಸಂ.(5)ರ ಪತ್ರದಲ್ಲಿ ದಂಡನೆಯನ್ನು ಪರಿಷ್ಕರಿಸಿ ಕೆ.ಸಿ.ಎಸ್.ಆರ್ ನಿಯಮಾವಳಿಗಳ ನಿಯಮ 214(1)(ಎ) ರನ್ವಯ ಆಪಾದಿತರ ಪಿಂಚಣಿಯಲ್ಲಿ ಶೇ.25 ರಷ್ಟನ್ನು ಶಾಸ್ವತವಾಗಿ ತಡೆಹಿಡಿಯುವ ದಂಡನೆಯನ್ನು ವಿಧಿಸಲು ಶಿಫಾರಸ್ಸು ಮಾಡಿರುತ್ತಾರೆ.

ಆದರೆ ಪ್ರಸ್ತುತ ಪ್ರಕರಣದಲ್ಲಿ ಆಪಾದಿತರು ಭೂ ಪರಿಹಾರ ಮೊತ್ತ ರೂ.53,106/– ಅನ್ನು ಶ್ರೀ ಹೊಸಳಯ್ಯ ಬಿನ್ ಗಂಗಹೊಸಳಯ್ಯ ಎಂಬ ತಪ್ಪು ವ್ಯಕ್ತಿಗೆ ಪಾವತಿ ಮಾಡಿದ್ದು, ಅನಂತರ ಸದರಿ ಮೊತ್ತವನ್ನು ಪಾವತಿ ಮಾಡಿದ ಬದಲಿ ವ್ಯಕ್ತಿಯಿಂದ ಮಾಡಿ ಸರ್ಕಾರಕ್ಕೆ ಜಮೆ ಮಾಡಿರುತ್ತಾರೆ. ಇದರಿಂದಾಗಿ ಅಧಿಕಾರಿಯಿಂದ ಕರ್ತವ್ಯಲೋಪವಾಗಿರುವ ಅಂಶ ಸಾಬೀತಾಗುವುದಾದರೂ, ಅವರ ಈ ಕೃತ್ಯದಿಂದ ಸರ್ಕಾರಕ್ಕೆ ಯಾವುದೇ ಆರ್ಥಿಕ ನಷ್ಟ ಉಂಟಾಗಿರುವುದಿಲ್ಲ. ಆದುದರಿಂದ ಸನ್ಮಾನ್ಯ ಉಪ ಲೋಕಾಯುಕ್ತರು ಶ್ರೀ ಅಬ್ದುಲ್ ರಹೀಂ.ಕೆ.ಎ.ಎಸ್ (ನಿವೃತ್ತ) ಅಧಿಕಾರಿ ರವರ ನಿವೃತ್ತಿ ವೇತನದಿಂದ ಶೇ.25 ರಷ್ಟು ಪಿಂಚಣಿಯನ್ನು ಖಾಯಂ ಆಗಿ ತಡೆಹಿಡಿಯಲು ಮಾಡಿರುವ ಶಿಫಾರಸ್ಸು ಸಾಬೀತಾದ ಕರ್ತವ್ಯಲೋಪಕ್ಕೆ ಅನುಗುಣವಾಗಿ ಇರುವುದಿಲ್ಲವೆಂದು ಕಂಡುಬಂದಿರುವ ಹಿನ್ನೆಲೆಯಲ್ಲಿ ಹಾಗೂ ಸದರಿ ಅಧಿಕಾರಿಯು ಈಗಾಗಲೇ ಸೇವೆಯಿಂದ ನಿವೃತ್ತರಾಗಿರುವುದರಿಂದ, ಪಾವತಿ ಮಾಡಿದ್ದ ಭೂಪರಿಹಾರ ಮೊತ್ತವನ್ನು ವಸೂಲಿ ಮಾಡಿ ಸರ್ಕಾರಕ್ಕೆ ಜಮೆ ಮಾಡಿರುವುದರಿಂದ, ಹಾಗೂ ಇದರಿಂದ ಸರ್ಕಾರಕ್ಕೆ ಯಾವುದೇ ಆರ್ಥಿಕ ನಷ್ಟವಾಗದಿರುವುದರಿಂದ ಇವರು ಎಸಗಿರುವ ತಪ್ಪನ್ನು ಮನ್ನಿಸಿ ಮಾನವೀಯತೆ ದೃಷ್ಟಿಯಿಂದ ಅವರನ್ನು ಆರೋಪಗಳಿಂದ ಮುಕ್ತಗೊಳಿಸಲು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 139 ಎಸ್‌ಇಎನ್ 2005 (ಸಿಆಸುಇ 117 ಕೆಇವಿ 2007), ಬೆಂಗಳೂರು, ದಿನಾಂಕ: 20ನೇ ಫೆಬ್ರವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ ಸರ್ಕಾರವು ಶ್ರೀ ಅಬ್ದುಲ್ ರಹೀಂ ಕೆ.ಎ.ಎಸ್. (ನಿವೃತ್ತ) ಅಧಿಕಾರಿ ಇವರನ್ನು ದಿ:14.03.2006ರ ಸರ್ಕಾರಿ ಆದೇಶದಲ್ಲಿ ಮಾಡಲಾದ ಆರೋಪಗಳಿಂದ ಆರೋಪಮುಕ್ತರನ್ನಾಗಿಸುತ್ತದೆ.

ಈ ಇಲಾಖಾ ವಿಚಾರಣೆ ನಡೆಯದಿದ್ದಲ್ಲಿ ಅವರು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಪಿ.ಆರ್. 763

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2).

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ:** ಕರ್ನಾಟಕ ರಾಜ್ಯ ಮಕ್ಕಳ ಹಕ್ಕುಗಳ ರಕ್ಷಣೆ ಆಯೋಗಕ್ಕೆ ಮೇಲು ಸಹಿಯ ಪ್ರತ್ಯಾಯವನ್ನು ನೀಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಮಮಇ 47 ಮಬಾಬ 2006 ದಿ: 27.09.2007.
2. ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಇವರ ಏಕ ಕಡತ ಸಂಖ್ಯೆ: ಮಮಅಇ/ ಕರಾಮಹರಅ:ಪ್ರಪತ್ರ:08–09.
3. ಸರ್ಕಾರದ ಆದೇಶ ಸಂಖ್ಯೆ: ಮಮಇ 400 ಎಸ್‌ಜೆಡಿ 2008 ದಿ: 15.9.2008.
4. ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಇವರ ಪತ್ರ ಸಂಖ್ಯೆ: ಕರಾಮಹರಅ: ಪ್ರದತ್ತ: 2008–09 ದಿನಾಂಕ: 21.01.2009.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿ: 27.09.2007ರ ಆದೇಶದಲ್ಲಿ ಮಕ್ಕಳ ಆರೋಗ್ಯ, ಪೌಷ್ಠಿಕ ಆಹಾರ ಶಿಕ್ಷಣ, ರಕ್ಷಣೆ ಮತು ಬೆಳವಣಿಗೆ ಹಿತದೃಷ್ಟಿಯಿಂದ ಮಕ್ಕಳ ಹಕ್ಕು ರಕ್ಷಣೆಗೆ ಆಯೋಗ ಅಧಿನಿಯಮ 2006 ರ ಪ್ರಕರಣ 17(1) ರನ್ವಯ 12 ಹುದ್ದೆಗಳನ್ನು ಒಳಗೊಂಡು ಕರ್ನಾಟಕ ರಾಜ್ಯ ಮಕ್ಕಳ ಹಕ್ಕುಗಳ ರಕ್ಷಣೆಯ ಆಯೋಗದ ಸೃಜನೆಗೆ ಮಂಜೂರಾತಿ ನೀಡಲಾಗಿದೆ.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ನಿರ್ದೇಶಕರ ಕಛೇರಿಯ ಏಕಕಡತದಲ್ಲಿ ಕರ್ನಾಟಕ ರಾಜ್ಯ ಮಕ್ಕಳ ಹಕ್ಕುಗಳ ರಕ್ಷಣ ಆಯೋಗದ ಕಛೇರಿಯು ಬೆಂಗಳೂರಿನಲ್ಲಿ ಪ್ರಾರಂಭಗೊಂಡಿದ್ದು, ಸದರಿ ಆಯೋಗದ ಚಟುವಟಿಕೆಗಳನ್ನು ನಿರ್ವಹಿಸುವ ಸಲುವಾಗಿ ಸಂಬಂಧಪಟ್ಟ ಖಜಾನೆಯಿಂದ ಆರ್ಥಿಕ ವ್ಯವಹಾರವನ್ನು ನಿರ್ವಹಿಸಲು ಸಂಬಂಧಪಟ್ಟ ಕಛೇರಿಯ ಸಹಾಯಕ ನಿರ್ದೇಶಕರಿಗೆ ಆರ್ಥಿಕ ಪ್ರಾಧಿಕಾರವನ್ನು ನೀಡಬೇಕಾಗಿದೆಯೆಂದು ಅಧಿಕಾರಿ/ಸಿಬ್ಬಂದಿಯವರು ಕರ್ತವ್ಯ ನಿರ್ವಹಿಸುತ್ತಿದ್ದು, ವೇತನ ಭತ್ಯೆ ಹಾಗೂ ಆರ್ಥಿಕ ವೆಚ್ಚ ಭರಿಸಲು ಹಣ ಸೆಳೆಯುವ ಹಾಗೂ ಬಟವಾಡೆ ಅಧಿಕಾರಿಗೆ ಅಧಿಕಾರ ನೀಡಲು ಆರ್ಥಿಕ ಇಲಾಖೆಯ ಆದೇಶ ಪಡೆಯುವಂತೆ ಕೋರಿರುತ್ತಾರೆ. ಅದರಂತೆ ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ದಿ: 15.09.2008 ರ ಆದೇಶದಲ್ಲಿ ಆರ್ಥಿಕ ಸಂಹಿತೆ ಅನುಚ್ಛೇದ 17(ಸಿ), 49 ಮತ್ತು 50 ರನ್ವಯ ಮಹಾಲೇಖಪಾಲರ ಅಧಿಕಾರ ಪಡೆಯುವ ಷರತ್ತಿಗೊಳಪಟ್ಟು ಕರ್ನಾಟಕ ರಾಜ್ಯ ಮಕ್ಕಳ ಹಕ್ಕುಗಳ ರಕ್ಷಣೆ ಆಯೋಗದ ಸಹಾಯಕ ನಿರ್ದೇಶಕರನ್ನು ಹಣ ಸೆಳೆಯುವ ಮತ್ತು ಬಟವಾಡೆ ಅಧಿಕಾರಿಯನ್ನಾಗಿ ಘೋಷಿಸಿದೆ.

ಮೇಲೆ ಕ್ರಮ ಸಂಖ್ಯೆ (4) ರಲ್ಲಿ ಓದಲಾದ ದಿ:21.1.2009 ರ ಪತ್ರದಲ್ಲಿ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರು ಪ್ರಸ್ತಾವನೆ ಸಲ್ಲಿಸಿ ಸರ್ಕಾರದ ಆದೇಶ ಸಂಖ್ಯೆ ಮಮಇ 47 ಮಭಾಬ 2006 ದಿ: 27.09.2007 ರಲ್ಲಿ ಕರ್ನಾಟಕ ರಾಜ್ಯ ಮಕ್ಕಳ ಹಕ್ಕುಗಳ ರಕ್ಷಣಾ ಆಯೋಗವು ಹೊಸದಾಗಿ ಸೃಜನೆಯಾಗಿದ್ದು, ಸದರಿ ಆಯೋಗಕ್ಕೆ 2008–09ನೇ ಸಾಲಿನಲ್ಲಿ ರೂ.50.00 ಲಕ್ಷಗಳು ನಿಗದಿಪಡಿಸಲಾಗಿದ್ದು, ಸರ್ಕಾರದ ಆದೇಶ ಸಂಖ್ಯೆ: ಮಮಇ 238 ಮಭಾಬ 2008 ದಿ: 3.10.2008 ರನ್ವಯ 3ನೇ ತ್ರೈಮಾಸಿಕದಲ್ಲಿ ರೂ.15.00 ಲಕ್ಷಗಳು ಬಿಡುಗಡೆಯಾಗಿದ್ದು, ಆಯೋಗವು ಹೊಸ ಕಚೇರಿಯಾಗಿರುವುದರಿಂದ ಸರ್ಕಾರವು ಆದೇಶ ಸಂಖ್ಯೆ: ಮಮಇ 400 ಎಸ್‌ಜೆಡಿ 2008 ದಿ: 15.09.2008 ರಲ್ಲಿ ಸಹಾಯಕ ನಿರ್ದೇಶಕರಿಗೆ ಬಟವಾಡೆ ಅಧಿಕಾರಿಯಾಗಿ ಅಧಿಕಾರ ಪ್ರದತ್ತ ಮಾಡಿರುತ್ತದೆಂದು, ಅದರಂತೆ ಸಿಬ್ಬಂದಿಗಳ ವೇತನ ಹಾಗೂ ಭತ್ಯೆಗಳನ್ನು ಪಾವತಿಸಲಾಗುತ್ತದೆ ಎಂದು ಆದರೆ ಕಛೇರಿಯ ನಿರ್ವಹಣೆಗಾಗಿ ಅತ್ಯವಶ್ಯವಿರುವ ಸಾದಿಲ್ವಾರು ಖರ್ಚುಗಳನ್ನು ಭರಿಸಲು (ಲೇಖನ ಸಾಮಗ್ರಿ ಇತ್ಯಾದಿ) ಕಷ್ಟಸಾಧ್ಯವಾಗುತ್ತದೆಂದು, ಆರ್ಥಿಕ ಅಧಿಕಾರ ಪ್ರದತ್ತ ಮಾಡಿರುವ ಬಗ್ಗೆ ಸರ್ಕಾರದಿಂದ ಸ್ಪಷ್ಟೀಕರಣ ದೊರೆತಿಲ್ಲದ ಕಾರಣ ಬಿಡುಗಡೆಯಾದ ಆಯವ್ಯಯವನ್ನು ವೆಚ್ಚ ಮಾಡಲು ಸಾಧ್ಯವಾಗುತ್ತಿಲ್ಲವೆಂದು ವರದಿ ಮಾಡುತ್ತಾ, ಆಯೋಗದ ಕಚೇರಿಯಲ್ಲಿ ಅಧ್ಯಕ್ಷರ ಹಾಗೂ ಸದಸ್ಯರ ನೇಮಕಾತಿಯು ಸದ್ಯದಲ್ಲೇ ಪೂರ್ಣಗೊಳ್ಳುವುದರಿಂದ ಆಯೋಗದ ನಿರ್ವಹಣೆಯ ಹಿತದೃಷ್ಟಿಯಿಂದ ಮೇಲು ಸಹಿಯ ಪ್ರದತ್ತವನ್ನು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಒಬ್ಬ ಹಿರಿಯ ಅಧಿಕಾರಿಗಳಿಗೆ ನೀಡುವಂತೆ ಕೋರಿರುತ್ತಾರೆ.

ಸರ್ಕಾರವು ನಿರ್ದೇಶಕರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ತಾತ್ಕಾಲಿಕವಾಗಿ ಕರ್ನಾಟಕ ರಾಜ್ಯ ಮಹಿಳಾ ಹಕ್ಕುಗಳ ರಕ್ಷಣಾ ಆಯೋಗಕ್ಕೆ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಜಂಟಿ ನಿರ್ದೇಶಕರು (ಆಡಳಿತ) ಕೇಂದ್ರ

ಕಛೇರಿ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರಿಗೆ ಮೇಲು ಸಹಿ ಅಧಿಕಾರವನ್ನು ವಹಿಸಲು ತೀರ್ಮಾನಿಸಿ ಆಂತರಿಕ ಆರ್ಥಿಕ ಸಲಹೆಗಾರರ ಅನುಮೋದನೆಯೊಂದಿಗೆ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಮಮಇ 70 ಎಸ್‌ಜೆಡಿ 2009, ಬೆಂಗಳೂರು, ದಿನಾಂಕ: 28ನೇ ಫೆಬ್ರವರಿ 2009**

ಮೇಲೆ ವಿವರಿಸಿರುವ ವಾಸ್ತವಾಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಮಕ್ಕಳ ಹಕ್ಕುಗಳ ರಕ್ಷಣಾ ಆಯೋಗದ ಕಾರ್ಯ ನಿರ್ವಹಣೆಯ ದೃಷ್ಟಿಯಿಂದ ಜಂಟಿ ನಿರ್ದೇಶಕರು (ಆಡಳಿತ), ಕೇಂದ್ರ ಕಛೇರಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರಿಗೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಮೇಲು ಸಹಿ ಅಧಿಕಾರವನ್ನು ವಹಿಸಿ ಆದೇಶಿಸಿದೆ.

ಈ ಆದೇಶವನ್ನು ದಿ: 11.02.2009 ರ ಸಂಖ್ಯೆ: ಸಕಕಾ 40 ಆಂಆಸ 09 ರ ಅಂತರಿಕ ಆರ್ಥಿಕ ಸಲಹೆಗಾರರ ಇಲಾಖೆಯ ಅನುಮೋದನೆಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 778 **ಆರ್. ನರಸಿಂಹಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ–2 (ಪ್ರಭಾರ), ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

**ಅಧಿಸೂಚನೆ ಸಂಖ್ಯೆ: ಮಮಇ: 80 ಮಅನಿ 2008, ಬೆಂಗಳೂರು, ದಿನಾಂಕ: 25ನೇ ಫೆಬ್ರವರಿ 2009**

2008–09ನೇ ಸಾಲಿನಲ್ಲಿ ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮದ ವತಿಯಿಂದ ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ವಿದ್ಯಾವಂತ ನಿರುದ್ಯೋಗಿ ಮಹಿಳೆಯರಿಗೆ ಉಚಿತವಾಗಿ ಗಣಕ ಯಂತ್ರ ತರಬೇತಿಯನ್ನು ನೀಡುವ ಬಗ್ಗೆ ಕಾಲಾವಕಾಶ ಕಡಿಮೆ ಇರುವುದರಿಂದ ಟೆಂಡರ್ ಕರೆಯಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ನಿಯಮಗಳು 2000ದ ನಿಯಮ 17[2]ರಂತೆ ಟೆಂಡರ್ ಬುಲೆಟಿನ್‌ನಲ್ಲಿ ಟೆಂಡರ್‌ಗಳನ್ನು ಆಹ್ವಾನಿಸುವ ನೋಟೀಸಿನ ಪ್ರಕಟಣೆ ದಿನಾಂಕ ಮತ್ತು ಟೆಂಡರ್‌ಗಳನ್ನು ಸಲ್ಲಿಸಲು ಕೊನೆಯ ದಿನಾಂಕದ ನಡುವೆ ಇರಬೇಕಾದ ಕನಿಷ್ಠ 30 ದಿನಗಳ ಕಾಲಾವಕಾಶವನ್ನು, ಸದರಿ ನಿಯಮಗಳ ನಿಯಮ 17[2]ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, 15 ದಿನಗಳಿಗೆ ಕಡಿತಗೊಳಿಸಿ ಆದೇಶಿಸಿದೆ.

ಮುಂದುವರೆದು, ಕೆ.ಟಿ.ಪಿ.ಪಿ.ಅಧಿನಿಯಮ 2000ದ ಪರಿಚ್ಛೇದ 9(i) ರಡಿ ಪ್ರಧಾನ ವ್ಯವಸ್ಥಾಪಕರು, ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ ಇವರನ್ನು ಟೆಂಡರ್ ಕರೆಯುವ ಪ್ರಾಧಿಕಾರವೆಂದೂ ಹಾಗೂ ಸದರಿ ಅಧಿನಿಯಮದ ಪರಿಚ್ಛೇದ 9(ii) ರಡಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ ಇವರನ್ನು ಟೆಂಡರ್ ಅಂಗೀಕರಿಸುವ ಪ್ರಾಧಿಕಾರವೆಂದು ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 779 **ಎಂ.ಎಸ್. ಮಂಜುನಾಥ್**

ಸರ್ಕಾರದ ಉಪ ಕಾರ್ಯದರ್ಶಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

**ವಿಷಯ:** ಶ್ರೀ ವೈ.ಬಿ.ಶಿಂದೆ, ಸಹಾಯಕ ನಿರ್ದೇಶಕರು ಹಾಗೂ ಪ್ರಭಾರ ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ರಾಯಚೂರು ಇವರ ಅಮಾನತ್ತಿನ ಆದೇಶವನ್ನು ರದ್ದುಪಡಿಸಿ ಸೇವೆಗೆ ಪುನರ್ ಸ್ಥಾಪಿಸುವ ಕುರಿತು–ಆದೇಶ.

**ಓದಲಾಗಿದೆ:**

1. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ರಾಯಚೂರು, ಇವರ ಪತ್ರ ಸಂಖ್ಯೆ: ಜಿ.ಪಂ.ರಾ/13/ಸಿಸಿಎ/2007/ 2820 ದಿ: 12.10.2007.
2. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ರಾಯಚೂರು, ಇವರ ಆದೇಶ ಸಂಖ್ಯೆ: ಜಿ.ಪಂ.ರಾ/13/ಸಿಸಿಎ/2007–08/1015 ದಿ: 7.8.2007.
3. ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು ಇವರ ಆದೇಶ ಸಂಖ್ಯೆ: ನಿಸಿಶಿಪ/15/07–08 ದಿ: 6.10.2007.
4. ಸರ್ಕಾರದ ಆದೇಶ ಸಂಖ್ಯೆ: ಮಮಇ 545 ಎಸ್‌ಜೆಡಿ 2007 ದಿ: 23.11.2007.
5. ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರ ಪತ್ರ ಸಂಖ್ಯೆ: ನಿಸಿಶಿಪ/15/07–08 ದಿ: 10.12.2007–(ಪುಟ 72–72)
6. ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರ ಪತ್ರ ಸಂಖ್ಯೆ: ನಿಸಿಶಿಪ/15/07–08 ದಿ: 20.03.2008–(ಪುಟ 186)

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ:12.10.20078 ಪತ್ರದಲ್ಲಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ರಾಯಚೂರು ಜಿಲ್ಲೆ, ಇವರು ಪ್ರಸ್ತಾವನೆ ಸಲ್ಲಿಸಿ, ಅಂಗವಿಕಲರ ಮತ್ತು ಹಿರಿಯ ನಾಗರೀಕರ ಕಲ್ಯಾಣ ಇಲಾಖೆಯ ಆರ್ಥಿಕ ಸಹಾಯದೊಂದಿಗೆ ನಡೆಸಲಾಗುತ್ತಿರುವ ಅಂಗವಿಕಲರ ಪುನರ್‌ವಸತಿ ಹಾಗೂ ಮಹಿಳಾ ಶಿಕ್ಷಣಾರ್ಥಿಗಳ ವಸತಿ ನಿಲಯಗಳಿಗೆ ಸಂಬಂಧಿಸಿದಂತೆ, ರಾಯಚೂರು ಜಿಲ್ಲೆಯ ಶ್ರೀ ರೇವಣಸಿದ್ದೇಶ್ವರ ಸಂಸ್ಥೆ, ಬೀದರ್ ಶಾಖಾವತಿಯಿಂದ ಬೋಳಮಾನ ದೊಡ್ಡಿ ರಸ್ತೆಯಲ್ಲಿ ನಡೆಸುತ್ತಿರುವ ವಿದ್ಯಾರ್ಥಿ ನಿಲಯ ಹಾಗೂ ಸಂಕಲ್ಪ ಸಂಸ್ಥೆ, ರಾಯಚೂರು ಇವರಿಂದ ನಡೆಸಲ್ಪಡುತ್ತಿರುವ ವಿದ್ಯಾರ್ಥಿ ನಿಲಯಗಳಲ್ಲಿ ಕೆಲವೊಂದು ನ್ಯೂನ್ಯತೆಗಳು ಕಂಡು ಬಂದಿದ್ದು, ಶ್ರೀ ಎಂ.ಎನ್. ನಾಯಕ್, ಜಿಲ್ಲಾ ಅಂಗವಿಕಲರ ಹಾಗೂ ಹಿರಿಯ ನಾಗರೀಕರ ಕಲ್ಯಾಣಾಧಿಕಾರಿ ಹಾಗೂ ಶ್ರೀ ವೈ.ಬಿ.ಶಿಂದೆ, ಸಹಾಯಕ ನಿರ್ದೇಶಕರು ಹಾಗೂ

ಪ್ರಭಾರ ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ರಾಯಚೂರು ಇವರುಗಳು ಕಾಲಕಾಲಕ್ಕೆ ಸರಿಯಾದ ಮೇಲ್ವಿಚಾರಣೆ ನಡೆಸದೇ ಇರುವ ಕಾರಣವಾಗಿದೆಯೆಂದು ಅಭಿಪ್ರಾಯಪಟ್ಟು, ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ ಜಿಲ್ಲಾ ಪಂಚಾಯತ್, ರಾಯಚೂರು, ಇವರು ಮೇಲೆ (2) ರಲ್ಲಿ ಓದಲಾದ ದಿ: 7.8.2007ರ ಆದೇಶದಲ್ಲಿ ಶ್ರೀ ಎಂ.ಎನ್. ನಾಯಕ್, ಜಿಲ್ಲಾ ಅಂಗವಿಕಲರ ಹಾಗೂ ಹಿರಿಯ ನಾಗರೀಕರ ಕಲ್ಯಾಣಾಧಿಕಾರಿ, ರಾಯಚೂರು ಇವರನ್ನು ಅಮಾನತ್ತಿನಲ್ಲಿ ಇಟ್ಟಿರುತ್ತಾರೆ. ಶ್ರೀ ಎಂ.ಎನ್. ನಾಯಕ್, ಜಿಲ್ಲಾ ಅಂಗವಿಕಲರರ ಹಾಗೂ ಹಿರಿಯ ನಾಗರೀಕರ ಕಲ್ಯಾಣಾಧಿಕಾರಿ, ರಾಯಚೂರುವರಿಗೆ ಸಕ್ಷಮ ಪ್ರಾಧಿಕಾರ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಆಗಿರುವುದರಿಂದ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ ಜಿಲ್ಲಾ ಪಂಚಾಯತ್, ರಾಯಚೂರುರವರು ದಿ: 7.8.2007 ರಂದು ಹೊರಡಿಸಿರುವ ಆದೇಶವು ಅಸಿಂಧುವಾಗಿರುವುದರಿಂದ ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಜಿಲ್ಲಾ ಪಂಚಾಯತ್, ರಾಯಚೂರು ರವರು ಹೊರಡಿಸಿರುವ ಆದೇಶವನ್ನು ರದ್ದುಗೊಳಿಸಿ, ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರು ಸಕ್ಷಮ ಪ್ರಾಧಿಕಾರಿಯಾಗಿ ಮೇಲೆ (3) ರಲ್ಲಿ ಓದಲಾದ ದಿ: 6.10.2007 ರಂದು ಆದೇಶ ಹೊರಡಿಸಿ, ಶ್ರೀ ಎಂ.ಎನ್. ನಾಯಕ್, ಜಿಲ್ಲಾ ಅಂಗವಿಕಲರ ಹಾಗೂ ಹಿರಿಯ ನಾಗರೀಕರ ಕಲ್ಯಾಣಾಧಿಕಾರಿ, ರಾಯಚೂರು, ಇವರ ಮೇಲಿನ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ, ಸದರಿಯವರನ್ನು ಸೇವೆಯಿಂದ ಅಮಾನತ್ತುಗೊಳಿಸಿ ಆದೇಶಿಸಿರುತ್ತಾರೆ. ಶ್ರೀ ವೈ.ಬಿ. ಶಿಂದೆ ಸಹಾಯಕ ನಿರ್ದೇಶಕರು ಹಾಗೂ ಪ್ರಭಾರ ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ರಾಯಚೂರು, ಇವರು ಗ್ರೂಪ್ 'ಎ' ಅಧಿಕಾರಿಯಾಗಿರುವುದರಿಂದ ಅವರ ವಿರುದ್ಧದ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ ಸೇವೆಯಿಂದ ಅಮಾನತ್ತುಗೊಳಿಸಿ ಶಿಸ್ತು ಕ್ರಮ ಕೈಗೊಳ್ಳುವಂತೆ ಉಲ್ಲೇಖ (1)ರ ದಿ: 6.8.2007ರ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್ ರಾಯಚೂರು ರವರ ವರದಿಯನ್ನು ಸರ್ಕಾರವು ಪರಿಶೀಲಿಸಿ ಮೇಲೆ (4)ರಲ್ಲಿ ಓದಲಾದ ದಿ: 23.11.2007 ರ ಆದೇಶದಲ್ಲಿ ಶ್ರೀ ವೈ.ಬಿ.ಶಿಂದೆ, ಸಹಾಯಕ ನಿರ್ದೇಶಕರು ಹಾಗೂ ಪ್ರಭಾರ ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ರಾಯಚೂರು, ಇವರನ್ನು ಅವರ ಮೇಲಿನ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ ಅಮಾನತ್ತುಗೊಳಿಸಿ ಆದೇಶಿಸಲಾಗಿದೆ.

ಮೇಲೆ (5) ರಲ್ಲಿ ಓದಲಾದ ದಿ:10.12.2007ರ ಪತ್ರದಲ್ಲಿ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಇವರು ಪ್ರಸ್ತುತ ಹಲವು ಜಿಲ್ಲೆಗಳಲ್ಲಿ ಉಪನಿರ್ದೇಶಕರು/ಸಹಾಯಕ ನಿರ್ದೇಶಕರ ಹುದ್ದೆ ಖಾಲಿ ಇದ್ದು, ಇಲಾಖೆಯ ಜರೂರು ಯೋಜನೆಗಳ ಅನುಷ್ಠಾನದ ದೃಷ್ಟಿಯಿಂದ ಶ್ರೀ ವೈ.ಬಿ.ಶಿಂಧೆ, ಸಹಾಯಕ ನಿರ್ದೇಶಕರು, ಇವರನ್ನು ಜರೂರಾಗಿ ಸರ್ಕಾರಿ ಸೇವೆಗೆ ಪುನರ್ ಸ್ಥಾಪಿಸಬಹುದೆಂದು ಅಭಿಪ್ರಾಯ ಪಟ್ಟಿರುತ್ತಾರೆ.

ಮೇಲೆ (6)ರಲ್ಲಿ ಓದಲಾದ ದಿ:20.03.2008 ರ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ರವರ ಕಛೇರಿಯ ಆದೇಶದಲ್ಲಿ ಶ್ರೀ ಎಂ.ಎನ್. ನಾಯಕ್, ಅಂಗವಿಕಲರ ಕಲ್ಯಾಣಾಧಿಕಾರಿ ಇವರನ್ನು ಅವರ ವಿರುದ್ಧದ ಇಲಾಖಾ ವಿಚಾರಣೆ ಬಾಕಿ ಇರಿಸಿ ಅವರನ್ನು ಸರ್ಕಾರಿ ಸೇವೆಗೆ ಪುನರ್ ಸ್ಥಾಪಿಸಲಾಗಿದೆಯೆಂದು ವರದಿಯಾಗಿದೆ.

ಸರ್ಕಾರವು ನಿರ್ದೇಶಕರ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ, ಶ್ರೀ ವೈ.ಬಿ.ಶಿಂಧೆ, ಸಹಾಯಕ ನಿರ್ದೇಶಕರು, ಇವರನ್ನು ಅಮಾನತ್ತುಗೊಳಿಸಿ ಈಗಾಗಲೇ ಒಂದು ವರ್ಷ ಮೂರು ತಿಂಗಳುಗಳು ಕಳೆದಿರುವುದರಿಂದ ಸದರಿಯವರನ್ನು ಅಮಾನತ್ತುಗೊಳಿಸಿ ಹೊರಡಿಸಿರುವ ಆದೇಶವನ್ನು ರದ್ದುಪಡಿಸಲು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಮಮಇ 545 ಎಸ್‌ಜಿಡಿ 2007, ಬೆಂಗಳೂರು, ದಿನಾಂಕ: 27ನೇ ಫೆಬ್ರವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ, ಶ್ರೀ ವೈ.ಬಿ.ಶಿಂಧೆ, ಸಹಾಯಕ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ರಾಯಚೂರು, ಇವರನ್ನು ಅವರ ಮೇಲಿನ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ, ದಿ:23.11.2007 ರಂದು ಅಮಾನತ್ತುಗೊಳಿಸಿ ಹೊರಡಿಸಿರುವ ಆದೇಶವನ್ನು ಪರಿಶೀಲಿಸಿ ಅವರನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಗೆ ಪುನರ್‌ಸ್ಥಾಪಿಸಿ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಅಧಿಕಾರಿ, ಕೊಪ್ಪಳ ಜಿಲ್ಲೆ ಇಲ್ಲಿನ ಖಾಲಿ ಹುದ್ದೆಗೆ ಸ್ಥಳ ನಿಯುಕ್ತಿಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ನರಸಿಂಹಯ್ಯ**

ಪಿ.ಆರ್. 780 ಸರ್ಕಾರದ ಅಧೀನ ಕಾರ್ಯದರ್ಶಿ–2 (ಪ್ರಭಾರ), ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

**ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ**

**ವಿಷಯ:** 2008–09ನೇ ಸಾಲಿಗೆ ಪರಿಶಿಷ್ಟ ಜಾತಿ ಉಪಯೋಜನೆ ಮತ್ತು ಗಿರಿಜನ ಉಪಯೋಜನೆಯಡಿ ವಿವಿಧ ಅಭಿವೃದ್ಧಿ ಇಲಾಖೆಗಳ ಕ್ರಿಯಾ ಯೋಜನೆಯನ್ನು ಅನುಷ್ಠಾನಗೊಳಿಸಲು ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ಮಾತಂಜೈತಂ ನಿರ್ದೇಶನಾಲಯರವರ ಪತ್ರ ಸಂಖ್ಯೆ ಮಾತಂಜೈತಂನಿ/ಲೆಕ್ಕ–1/ಗಿರಿಜನ/ಪರಿಶಿಷ್ಟಜಾತಿ/816/2008–09, ದಿನಾಂಕ: 12.2.2009.

**ಪ್ರಸ್ತಾವನೆ:**

ಆರ್ಥಿಕ ಇಲಾಖೆಯ "Special Component Plan and Tribal Sub-Plan-Annual Plan Outlay 2008-09" ಶಿರೋನಾಮೆಯಡಿಯಲ್ಲಿ ವಿವಿಧ ಇಲಾಖೆಗಳಿಗೆ ಅನುದಾನವನ್ನು ಹಂಚಿಕೆ ಮಾಡಲಾಗಿದ್ದು, ಮಾಹಿತಿ ತಂತ್ರಜ್ಞಾನ ಜೈವಿಕ

ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಗೆ SCP ಯಡಿಯಲ್ಲಿ ರೂ. 1.85 ಲಕ್ಷಗಳನ್ನು ಹಾಗೂ TSP ಯಡಿಯಲ್ಲಿ ರೂ. 0.47 ಲಕ್ಷಗಳನ್ನು ಹಂಚಿಕೆ ಮಾಡಲಾಗಿದ್ದು, ಸದರಿ ಸಂಬಂಧ ಮಾಹಿತಿ ತಂತ್ರಜ್ಞಾನ ಹಾಗೂ ಜೈವಿಕ ತಂತ್ರಜ್ಞಾನ ಇಲಾಖೆಯ ನಿರ್ದೇಶಕರಿಗೆ ಸದರಿ ಪ್ರಯೋಜನವನ್ನು ಪಡೆದುಕೊಳ್ಳುವ ಸಲುವಾಗಿ ಸಮಾಜ ಕಲ್ಯಾಣ ಇಲಾಖೆ ಮತ್ತು ಯೋಜನಾ ಇಲಾಖೆಗೆ ಕಳುಹಿಸಲು ಪ್ರಸ್ತಾವನೆಯನ್ನು ಕೋರಿ ಪತ್ರ ಬರೆಯಲಾಗಿತ್ತು.

ಮಾಹಿತಿ ತಂತ್ರಜ್ಞಾನ ಹಾಗೂ ಜೈವಿಕ ತಂತ್ರಜ್ಞಾನ ನಿರ್ದೇಶನಾಲಯವು ಕಿಯೋನಿಕ್ಸ್ ಸಂಸ್ಥೆಯ ವತಿಯಿಂದ SCP ಯಡಿಯಲ್ಲಿ 38 ವಿದ್ಯಾರ್ಥಿಗಳಿಗೆ 3 ತಿಂಗಳ ಕಂಪ್ಯೂಟರ್ ತರಬೇತಿ ನೀಡುವ ಯೋಜನೆ ಹಾಗೂ TSP ಯಡಿಯಲ್ಲಿ 15 ವಿದ್ಯಾರ್ಥಿಗಳಿಗೆ 2 ತಿಂಗಳ ಕಂಪ್ಯೂಟರ್ ತರಬೇತಿ ನೀಡುವ ಬಗ್ಗೆ ಪ್ರಸ್ತಾವಿಸಿ ಸಮಾಜ ಕಲ್ಯಾಣ ಇಲಾಖೆಯ ಆಯುಕ್ತರಿಗೆ ಸದರಿ ಅನುದಾನಗಳನ್ನು ಮಾಹಿತಿ ತಂತ್ರಜ್ಞಾನ ಹಾಗೂ ಜೈವಿಕ ತಂತ್ರಜ್ಞಾನ ನಿರ್ದೇಶನಾಲಯಕ್ಕೆ ಬಿಡುಗಡೆ ಮಾಡಲು ಪ್ರಸ್ತಾಪಿಸಲಾಗಿತ್ತು.

ಮೇಲೆ ಓದಲಾದ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯದ ಪತ್ರದಲ್ಲಿ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯವು ಪರಿಶಿಷ್ಟ ಜಾತಿ ಮತ್ತು ಗಿರಿಜನ ವಿದ್ಯಾರ್ಥಿಗಳಿಗೆ ಕಂಪ್ಯೂಟರ್ ತರಬೇತಿಯನ್ನು ಕರ್ನಾಟಕ ರಾಜ್ಯ ವಿದ್ಯುನ್ಮಾನ ಅಭಿವೃದ್ಧಿ ನಿಗಮ ನಿಯಮಿತ [ಕಿಯೋನಿಕ್ಸ್] ಮೂಲಕ ನೀಡಲು ಉದ್ದೇಶಿಸಿ ರೂಪಿಸಲಾಗಿದ್ದ ಕ್ರಿಯಾ ಯೋಜನೆಗೆ ದಿನಾಂಕ: 14.10.2008ರಂದು ನಡೆದ ಅಧಿಕಾರಯುಕ್ತ ಸಮಿತಿ ಸಭೆಯಲ್ಲಿ ಅನುಮೋದನೆ ನೀಡಲಾಗಿದೆ ಹಾಗೂ ಇಲಾಖೆಗಳ ಆಯವ್ಯಯ ಸವಿವರ ವೆಚ್ಚ ಸಂಪುಟದಲ್ಲಿ ಅನುದಾನವು ನಿಗದಿಯಾಗದೇ ಇದ್ದರೂ ಸಹ ಸಾಮಾನ್ಯ ಆಯವ್ಯಯದಡಿ ಒದಗಿಸಿದ ಅನುದಾನದಲ್ಲಿ ಕಡ್ಡಾಯವಾಗಿ ಮೀಸಲಿರಿಸಿ ಕಾರ್ಯಕ್ರಮಗಳನ್ನು ರೂಪಿಸಿ ಅನುಷ್ಠಾನಗೊಳಿಸಬೇಕೆಂದು ಸೂಚನೆ ನೀಡಿರುವುದಾಗಿ ತಿಳಿಸಿರುತ್ತಾರೆ.

ಅದರಂತೆ, 2008–09ನೇ ಸಾಲಿಗೆ ಪರಿಶಿಷ್ಟ ಜಾತಿ ಉಪಯೋಜನೆಯಡಿ ರೂ. 1.85 ಲಕ್ಷ ಹಾಗೂ ಗಿರಿಜನ ಉಪಯೋಜನೆಯಡಿ ರೂ. 0.47 ಲಕ್ಷಗಳನ್ನು ನಿಗದಿಪಡಿಸಲಾಗಿದ್ದು, ಇದನ್ನು ಅನುಷ್ಠಾನಗೊಳಿಸಲು ಪ್ರತ್ಯೇಕವಾದ ಅನುದಾನ ಒದಗಿಸಿರುವುದಿಲ್ಲವಾದ್ದರಿಂದ, 2008–09ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕ ಶೀರ್ಷಿಕೆ **'3451–00–090–2–01 ಮಾಹಿತಿ ತಂತ್ರಜ್ಞಾನದ ಉನ್ನತೀಕರಣ ಮತ್ತು ಅಭಿವೃದ್ಧಿ–059–ಇತರೆ ಖರ್ಚುಗಳು (ಯೋಜನೆ)'** ಇದರ ಅಡಿಯಲ್ಲಿ ಒದಗಿಸಲಾಗಿರುವ ಅನುದಾನದಲ್ಲಿ ರೂ. 2.32 ಲಕ್ಷಗಳನ್ನು [ಪರಿಶಿಷ್ಟ ಜಾತಿ ಉಪಯೋಜನೆಯಡಿ ರೂ. 1.85 ಲಕ್ಷ ಹಾಗೂ ಗಿರಿಜನ ಉಪಯೋಜನೆಯಡಿ ರೂ. 0.47 ಲಕ್ಷ] ಕಿಯೋನಿಕ್ಸ್ ಸಂಸ್ಥೆಗೆ ಬಿಡುಗಡೆ ಮಾಡಲು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ ಮಾತಂಇ 54 ಅಡವಿ 2008 [ಪಿ], ಬೆಂಗಳೂರು, ದಿನಾಂಕ: 5ನೇ ಮಾರ್ಚ್ 2009**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ, ಪರಿಶಿಷ್ಟ ಜಾತಿ ಮತ್ತು ಗಿರಿಜನ ವಿದ್ಯಾರ್ಥಿಗಳಿಗೆ ಕಿಯೋನಿಕ್ಸ್ ಮೂಲಕ ಕಂಪ್ಯೂಟರ್ ತರಬೇತಿ ನೀಡಲು ಪರಿಶಿಷ್ಟ ಜಾತಿ ಉಪಯೋಜನೆಯಡಿ ರೂ. 1.85 ಲಕ್ಷ ಹಾಗೂ ಗಿರಿಜನ ಉಪಯೋಜನೆಯಡಿ ರೂ. 0.47 ಲಕ್ಷ ಹೀಗೆ ಒಟ್ಟು ರೂ. 2.32 ಲಕ್ಷಗಳನ್ನು ಕಿಯೋನಿಕ್ಸ್ ಸಂಥೆಗೆ ವಿತರಿಸುವ ಸಂಬಂಧ ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ ಇವರಿಗೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿ ನೀಡಿದೆ.

ಸದರಿ ಅನುದಾನವನ್ನು ಆಡಳಿತಾಧಿಕಾರಿಗಳು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರು ನಿರ್ದೇಶಕರು ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರ ಮೇಲು ಸಹಿ ಪಡೆದು ಖಜಾನೆಯಿಂದ ಸದರಿ ಅನುದಾನವನ್ನು ಡ್ರಾ ಮಾಡಿ ನಿರ್ದೇಶಕರು, ಕಿಯೋನಿಕ್ಸ್ ಸಂಸ್ಥೆ ಇವರಿಗೆ ವಿತರಿಸತಕ್ಕದ್ದು.

ಈ ವೆಚ್ಚವನ್ನು 2008–09ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ **'3451–00–090–2–01 ಮಾಹಿತಿ ತಂತ್ರಜ್ಞಾನದ ಉನ್ನತೀಕರಣ ಮತ್ತು ಅಭಿವೃದ್ಧಿ–059–ಇತರೆ ಖರ್ಚುಗಳು (ಯೋಜನೆ)'** ಇದರ ಅಡಿಯಲ್ಲಿ ಪ್ರಸಕ್ತ ಸಾಲಿನಲ್ಲಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು.

ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ, ಇವರು ಅನುದಾನದ ಬಳಕೆಯ ಬಗ್ಗೆ ನಿರ್ದೇಶಕರು ಕಿಯೋನಿಕ್ಸ್ ಸಂಸ್ಥೆ ಇವರಿಂದ ಉಪಯೋಗಿತಾ ದೃಢೀಕರಣದ ಪತ್ರವನ್ನು ವೆಚ್ಚ ಮಾಡಿದ ಅನುದಾನದ ವಿವರಗಳ ಜೊತೆಗೆ ಪಡೆದು ಈ ಆರ್ಥಿಕ ವರ್ಷದೊಳಗಾಗಿ ಸರ್ಕಾರಕ್ಕೆ ಒದಗಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 29 ವೆಚ್ಚ–2/2009, ದಿನಾಂಕ: 17.02.2009 ರನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ವಿ. ಕೃಷ್ಣಮೂರ್ತಿ**

ಪಿ.ಆರ್. 786

ಸರ್ಕಾರದ ಅಧೀನ ಕಾರ್ಯದರ್ಶಿ,

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

**ಕರ್ನಾಟಕ ಸರ್ಕಾರದ ಸಚಿವಾಲಯ**

**ಸುತ್ತೋಲೆ ಸಂಖ್ಯೆ: ಸಿಆಸುಇ 144 ಶಿವಾನೀ 2008, ಬೆಂಗಳೂರು, ದಿನಾಂಕ: 27ನೇ ಫೆಬ್ರವರಿ 2009**

**ವಿಷಯ:** ಸರ್ಕಾರಿ ವಾಹನಗಳ ಮೇಲೆ ಕನ್ನಡ ನೋಂದಣಿ ಸಂಖ್ಯೆಯನ್ನು ಅಳವಡಿಸುವ ಬಗ್ಗೆ.

**ಉಲ್ಲೇಖ:**
1. ಸುತ್ತೋಲೆ ಸಂಖ್ಯೆ: ಸಿಆಸುಇ 174 ಶಿವಾನೀ 2000, ದಿನಾಂಕ: 18.08.2000.
2. ಸುತ್ತೋಲೆ ಸಂಖ್ಯೆ: ಸಿಆಸುಇ 144 ಶಿವಾನೀ 2008, ದಿನಾಂಕ: 11.11.2008.
3. ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರ ಅರೆ ಸರ್ಕಾರಿ ಪತ್ರ ಸಂ. ಕಅಪ್ರಾ /ಅ / 269 /2009, ದಿನಾಂಕ:12.02.2009.

ಸರ್ಕಾರಿ ವಾಹನಗಳ ಮೇಲೆ ಕೇವಲ ಆಂಗ್ಲ ಭಾಷೆಯ ಅಕ್ಷರ ಮತ್ತು ಸಂಖ್ಯೆಗಳಿದ್ದು ಇದರ ಜೊತೆಗೆ ಕನ್ನಡ ಅಕ್ಷರ ಮತ್ತು ಸಂಖ್ಯೆಗಳ ಫಲಕವನ್ನು ಅಳವಡಿಸುವಂತೆ ಉಲ್ಲೇಖ (1) ಮತ್ತು (2) ರ ಸುತ್ತೋಲೆಗಳಲ್ಲಿ ಸೂಚಿಸಲಾಗಿದೆ.

ಮೇಲ್ಕಂಡ ಸೂಚನೆಯನ್ನು ಪಾಲಿಸದಿರುವ ಬಗ್ಗೆ ಅಧ್ಯಕ್ಷರು, ಕನ್ನಡ ಅಭಿವೃದ್ಧಿ ಪ್ರಾಧಿಕಾರ ಇವರು ಉಲ್ಲೇಖ (3) ರ ಅರೆ ಸರ್ಕಾರಿ ಪತ್ರದಲ್ಲಿ ಸರ್ಕಾರದ ಗಮನಕ್ಕೆ ತಂದಿದ್ದು, ಈ ಕುರಿತು ಕಟ್ಟುನಿಟ್ಟಿನ ಸೂಚನೆಯನ್ನು ಎಲ್ಲಾ ಇಲಾಖೆಗಳಿಗೂ ಕೋರಿರುತ್ತಾರೆ.

ಸರ್ಕಾರದ ಎಲ್ಲಾ ವಾಹನಗಳ ಮೇಲೆ ಪ್ರಸ್ತುತ ಇರುವ ನೋಂದಣಿ ಸಂಖ್ಯೆಯ ಜೊತೆಗೆ ಕನ್ನಡ ಅಕ್ಷರ ಹಾಗೂ ಸಂಖ್ಯೆಗಳ ಫಲಕಗಳನ್ನು ಕಡ್ಡಾಯವಾಗಿ ಅಳವಡಿಸುವಂತೆ ಸುತ್ತೋಲೆ ಮೂಲಕ ಸೂಚನೆ ನೀಡಿದರೂ ಸಹ ಬಹುತೇಕ ಇಲಾಖೆಗಳಲ್ಲಿ ಸರ್ಕಾರಿ ವಾಹನಗಳಿಗೆ ಕನ್ನಡ ಸಂಖ್ಯೆಗಳ ಫಲಕವನ್ನು ಅಳವಡಿಸದಿರುವುದು ತುಂಬಾ ವಿಷಾದನೀಯ.

ಮಾನ್ಯ ಮುಖ್ಯಮಂತ್ರಿಯವರ, ಮಾನ್ಯ ಸಚಿವರ ಹಾಗೂ ಅತಿಥೇಯ ಸಂಸ್ಥೆಯ ವಾಹನಗಳು ಸೇರಿದಂತೆ ಸರ್ಕಾರದ ಎಲ್ಲಾ ಇಲಾಖೆಗಳ ಸರ್ಕಾರಿ ವಾಹನಗಳ ಮೇಲೆ ಪ್ರಸ್ತುತ ಇರುವ ನೋಂದಣಿ ಸಂಖ್ಯೆಯ ಜೊತೆಗೆ ಕನ್ನಡ ಅಕ್ಷರ ಹಾಗೂ ಸಂಖ್ಯೆಗಳ ಫಲಕಗಳನ್ನು ಕಡ್ಡಾಯವಾಗಿ ಅಳವಡಿಸುವಂತೆ ಈ ಮೂಲಕ ಮತ್ತೊಮ್ಮೆ ಸೂಚಿಸಲಾಗಿದೆ.

ಮೇಲೆ ಸೂಚಿಸಿದ ಅಂಶಗಳನ್ನು ತಪ್ಪದೇ ಪಾಲಿಸಬೇಕೆಂದು ಸಂಬಂಧಪಟ್ಟ ಎಲ್ಲಾ ಅಧಿಕಾರಿಗಳಿಗೂ ಈ ಮೂಲಕ ಮತ್ತೊಮ್ಮೆ ಸ್ಪಷ್ಟಪಡಿಸಲಾಗಿದೆ.

2009ರ ಮಾರ್ಚ್ 31 ರೊಳಗಾಗಿ ಸರ್ಕಾರದ ಎಲ್ಲಾ ವಾಹನಗಳಿಗೂ ಕನ್ನಡದಲ್ಲಿ ವಾಹನ ನೋಂದಣಿ ಸಂಖ್ಯೆಗಳನ್ನು ಕಡ್ಡಾಯವಾಗಿ ಬರೆಸತಕ್ಕದ್ದು. ತಪ್ಪಿದಲ್ಲಿ ಸಂಬಂಧಪಟ್ಟ ಅಧಿಕಾರಿಗಳನ್ನು ವೈಯಕ್ತಿಕ ಜವಾಬ್ದಾರರನ್ನಾಗಿ ಮಾಡಲಾಗುವುದೆಂದು ತಿಳಿಸಿದೆ.

ಸರ್ಕಾರದ ಎಲ್ಲಾ ಕಾರ್ಯದರ್ಶಿಗಳು ತಮ್ಮ ಆಡಳಿತ ವ್ಯಾಪ್ತಿಗೆ ಬರುವ ಇಲಾಖೆಗಳು, ನಿಗಮ/ಮಂಡಳಿಗಳು, ಸ್ವಾಯತ್ತ ಸಂಸ್ಥೆಗಳ ವಾಹನಗಳಿಗೆ ಕನ್ನಡದಲ್ಲಿ ವಾಹನ ನೋಂದಣಿ ಸಂಖ್ಯೆಗಳನ್ನು ಬರೆಸಿರುವ ಬಗ್ಗೆ ಅನುಪಾಲನಾ ವರದಿಯನ್ನು ಸಿ.ಆ.ಸು.ಇಲಾಖೆ (ರಾಜ್ಯ ಶಿಷ್ಟಾಚಾರ) ವಿಭಾಗಕ್ಕೆ ನೀಡತಕ್ಕದ್ದು.

**ಸುಧಾಕರ್ ರಾವ್**

ಪಿ.ಆರ್. 781 ಸರ್ಕಾರದ ಮುಖ್ಯ ಕಾರ್ಯದರ್ಶಿ, ಕರ್ನಾಟಕ ಸರ್ಕಾರ.

## ಶಿಕ್ಷಣ ಸಚಿವಾಲಯ

**ಸುತ್ತೋಲೆ ಸಂಖ್ಯೆ:ಇಡಿ 130 ಎಸ್ ಟಿಬಿ 2008, ಬೆಂಗಳೂರು, ದಿನಾಂಕ: 5ನೇ ಜನವರಿ 2009**

**ವಿಷಯ:** ಉನ್ನತ ಶಿಕ್ಷಣ ಇಲಾಖಾ ವತಿಯಿಂದ ನಡೆಸುವ ಭಯೋತ್ಪಾದನಾ ವಿರೋಧಿ ವಿದ್ಯಾರ್ಥಿ ಜಾಗೃತಿ ಅಭಿಯಾನದ ಬಗ್ಗೆ.

**ಉಲ್ಲೇಖ:**
1. ಸರ್ಕಾರಿ ಆದೇಶ ಸಂಖ್ಯೆ: ಇಡಿ 130 ಎಸ್‌ಟಿಬಿ:2008 ದಿನಾಂಕ: 20.12.2008 ಮತ್ತು 29.12.2008.
2. ಮಾನ್ಯ ಉನ್ನತ ಶಿಕ್ಷಣ ಸಚಿವರ ಅಧ್ಯಕ್ಷತೆಯಲ್ಲಿ ದಿನಾಂಕ: 30.12.2008ರಂದು ನಡೆದ ಸಭೆಯ ನಡವಳಿಗಳು.

ರಾಜ್ಯದಲ್ಲಿ ಭಯೋತ್ಪಾದನೆ ವಿರುದ್ಧ ವಿದ್ಯಾರ್ಥಿಗಳಲ್ಲಿ ಜಾಗೃತಿ ಮೂಡಿಸುವ ಸಂಬಂಧದಲ್ಲಿ ಮಾನ್ಯ ಉನ್ನತ ಶಿಕ್ಷಣ ಸಚಿವರ ಅಧ್ಯಕ್ಷತೆಯಲ್ಲಿ ರಾಜ್ಯ ಮತ್ತು ವಲಯ ಮಟ್ಟದ ಭಯೋತ್ಪಾದನಾ ವಿರೋಧಿ ವಿದ್ಯಾರ್ಥಿ ಜಾಗೃತಿ ಅಭಿಯಾನ ಸಮಿತಿಗಳನ್ನು ಈ ಕೆಳಕಂಡ ವಿಷಯಗಳಿಗೆ ಸಂಬಂಧಿಸಿದಂತೆ ರಚಿಸಲಾಗಿದೆ.

1) ರಾಜ್ಯ ಮತ್ತು ದೇಶದಲ್ಲಿ ಹೆಚ್ಚುತ್ತಿರುವ ಭಯೋತ್ಪಾದನೆ ಮತು ಉಗ್ರವಾದವನ್ನು ತಡೆಯಲು ವಿದ್ಯಾರ್ಥಿಗಳಲ್ಲಿ ಜಾಗೃತಿ ಮೂಡಿಸುವುದು.
2) ವಿದ್ಯಾರ್ಥಿಗಳು ತಮ್ಮ ಕಾಲೇಜುಗಳಲ್ಲಿ ಮತ್ತು ವಾಸಸ್ಥಳಗಳಲ್ಲಿ ಈ ಬಗ್ಗೆ ಎಚ್ಚರಿಕೆ ವಹಿಸುವಂತೆ ಸಾರ್ವಜನಿಕರಲ್ಲಿ ಅರಿವು ಮೂಡಿಸುವುದು.
3) ಈ ಕಾರ್ಯಕ್ರಮಗಳನ್ನು ಕಾಲೇಜು, ತಾಲ್ಲೂಕು, ಜಿಲ್ಲಾ, ವಲಯ, ವಿಶ್ವವಿದ್ಯಾಲಯ ಹಾಗೂ ರಾಜ್ಯ ಮಟ್ಟದಲ್ಲಿ ನಡೆಸುವುದು.
4) ವಿವಿಧ ಹಂತಗಳಲ್ಲಿ ಕಾರ್ಯಕ್ರಮಗಳನ್ನು ಯಶಸ್ವಿಗೊಳಿಸಲು ರಾಜ್ಯ ಮತ್ತು ವಲಯ ಸಮಿತಿಯ ಸಭೆಯಲ್ಲಿ ನಿರ್ಧರಿಸುವಂತೆ ಕಾರ್ಯಕಾರಿ ಹಾಗೂ ಕ್ರಿಯಾ ಸಮಿತಿಗಳನ್ನು ರಚಿಸಿಕೊಳ್ಳುವುದು.
5) ವಿವಿಧ ಹಂತಗಳಲ್ಲಿ ನಡೆಸಬೇಕಾದ ಚಟುವಟಿಕೆಗಳ ಬಗ್ಗೆ ರಾಜ್ಯ ಮತ್ತು ವಲಯ ಸಮಿತಿಯ ಸಭೆಯಲ್ಲಿ ನಿರ್ಧರಿಸುವಂತೆ ಕ್ರಮಕೈಗೊಳ್ಳುವುದು.
6) ಇದಕ್ಕೆ ಅನುಬಂಧಿಸಿರುವ ರಾಜ್ಯ ಮತ್ತು ವಲಯ ಸಮಿತಿಯ ಸಭೆಯಲ್ಲಿ ನಿರ್ದರಿಸಿರುವ ಮಾರ್ಗಸೂಚಿಗಳು ಹಾಗೂ ವೇಳಾ ಪಟ್ಟಿಗಳನ್ನು ಅನುಸರಿಸುವುದು.
7) ವಿವಿಧ ಮಟ್ಟದ ಸಮಿತಿಗಳ ಅಧಿಕಾರಿ ಮತ್ತು ಅಧಿಕಾರೇತರ ಅಧ್ಯಕ್ಷರು ಮತ್ತು ಸದಸ್ಯರುಗಳ ಕರ್ತವ್ಯ ಹಾಗೂ ಜವಾಬ್ದಾರಿಗಳು ಸರ್ಕಾರಿ ಆದೇಶದಲ್ಲಿ ಸೂಚಿಸಿರುವಂತೆ ಪಾಲಿಸುವುದು.

ಈ ಭಯೋತ್ಪಾದನಾ ವಿರೋಧಿ ವಿದ್ಯಾರ್ಥಿ ಅಭಿಯಾನ ಕಾರ್ಯಕ್ರಮವನ್ನು 2009ರ ಜನವರಿ ಮತ್ತು ಫೆಬ್ರವರಿ ತಿಂಗಳುಗಳಲ್ಲಿ ಹಮ್ಮಿಕೊಳ್ಳುವಂತೆ ಹಾಗೂ ರಾಜ್ಯದಲ್ಲಿರುವ ಎಲ್ಲಾ ವಿಶ್ವವಿದ್ಯಾಲಯಗಳ (ಸಾಮಾನ್ಯ ಶಿಕ್ಷಣ, ತಾಂತ್ರಿಕ ಶಿಕ್ಷಣ, ವೈದ್ಯಕೀಯ ಶಿಕ್ಷಣ, ಕೃಷಿ ಶಿಕ್ಷಣ, ಪಶುಸಂಗೋಪನಾ ಶಿಕ್ಷಣ, ಪದವಿ ಪೂರ್ವ ಶಿಕ್ಷಣ) ವ್ಯಾಪ್ತಿಯಲ್ಲಿ ಬರುವ ಪದವಿ ಕಾಲೇಜುಗಳು ಹಾಗೂ ಉನ್ನತ ಶಿಕ್ಷಣ ಸಂಸ್ಥೆಗಳಲ್ಲಿ ಈ ಕಾರ್ಯಕ್ರಮದ ಬಗ್ಗೆ ಅಗತ್ಯ ಕ್ರಮಕೈಗೊಳ್ಳುವಂತೆ ತಿಳಿಸಲಾಗಿದೆ. ಸದರಿ ಕಾರ್ಯಕ್ರಮಗಳನ್ನು ಯಶಸ್ವಿಗೊಳಿಸಲು ಅಗತ್ಯ ಎಲ್ಲಾ ಸಹಕಾರ : ಸಲಹೆ ನೀಡುವಂತೆ ಕೋರಿದೆ.

**ಸಿ.ಎಸ್. ಸುರಂಜನ**

ಸರ್ಕಾರದ ಪ್ರಧಾನ ಕಾರ್ಯದರ್ಶಿ, ಶಿಕ್ಷಣ ಇಲಾಖೆ.

**ಅನುಬಂಧ–1**

**ಸಾಮಾನ್ಯ ಮಾರ್ಗಸೂಚಿಗಳು**

- ವಿವಿಧ ಮಟ್ಟದ ಕಾರ್ಯಕಾರಿ ಸಮಿತಿಯನ್ನು ರಚಿಸುವುದು.
- ಈ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲು ಮೂಲಭೂತ ಸೌಕರ್ಯಗಳೊಂದಿಗೆ ಕಛೇರಿಯನ್ನು ಗುರುತಿಸಿಕೊಳ್ಳಬೇಕು. (ಕಂಪ್ಯೂಟರ್, ಇಂಟರ್ ನೆಟ್, ಫೋನ್, ಫ್ಯಾಕ್ಸ್, ಜೆರಾಕ್ಸ್ ಯಂತ್ರ ಹಾಗೂ ಸಿಬ್ಬಂದಿ)
- ಕಾರ್ಯಕ್ರಮಗಳ ಪೂರ್ವಸಿದ್ಧತಾ ಸಭೆಗಳನ್ನು ನಡೆಸುವುದು.
- ಪತ್ರಿಕಾ ಗೋಷ್ಠಿ ಏರ್ಪಡಿಸಿ ಕಾರ್ಯಕ್ರಮದ ಬಗ್ಗೆ ಸಮೂಹ ಮಾಧ್ಯಮಗಳಲ್ಲಿ ಸುದ್ದಿ ಮಾಡುವುದು.
- ಕಾರ್ಯಕ್ರಮ ಯಶಸ್ವಿಗೊಳಿಸಲು ವಿವಿಧ ಸಮಿತಿಗಳನ್ನು ರಚಿಸಿಕೊಳ್ಳಬೇಕು.
- ಅನುದಾನದ ಅನುಗುಣವಾಗಿ, ಸ್ಥಳೀಯ ಪರಿಸರಕ್ಕೆ ಹೊಂದಿಕೊಳ್ಳುವಂತೆ ಕಾರ್ಯಕ್ರಮವನ್ನು ರೂಪಿಸುವುದು.
- ಆಯಾ ನೋಡಲ್ ಅಧಿಕಾರಿಗಳಿಂದ ಮಾಹಿತಿ ಮತ್ತು ಮಾರ್ಗದರ್ಶನ ಪಡೆಯಬೇಕು ಹಾಗೂ ಅವರು ಕರೆಯುವ ಸಭೆಗಳಿಗೆ ಹಾಜರಾಗುವುದು.
- ಆಯಾ ನೋಡಲ್ ಅಧಿಕಾರಿಗಳು ತಮ್ಮ ಕೆಳಹಂತದ ನೋಡಲ್ ಅಧಿಕಾರಿಗಳ ಸಭೆ ಕರೆದು ಮಾಹಿತಿ ಹಾಗೂ ಮಾರ್ಗದರ್ಶನ ನೀಡುವುದು.
- ಆಯಾ ನೋಡಲ್ ಅಧಿಕಾರಿಗಳ ನೇತೃತ್ವದಲ್ಲಿ ಪ್ರಥಮ ಸ್ಥಾನ ವಿಜೇತ ವಿದ್ಯಾರ್ಥಿಗಳು ಜಾಥಾ ಮತ್ತು ಸಮಾವೇಶದಲ್ಲಿ ಪಾಲ್ಗೊಳ್ಳುವುದು.
- ವಿವಿಧ ಹಂತಗಳ ಸ್ಪರ್ಧೆಗಳಲ್ಲಿ (ಕಾಲೇಜು, ತಾಲ್ಲೂಕು, ಜಿಲ್ಲಾ, ವಲಯ) ಪ್ರಥಮ ಬಹುಮಾನ ಪಡೆದ ವಿದ್ಯಾರ್ಥಿಗಳನ್ನು ಮುಂದಿನ ಹಂತದ ಸ್ಪರ್ಧೆಗಳಲ್ಲಿ ಪಾಲ್ಗೊಳ್ಳುವಂತೆ ನೋಡಿಕೊಳ್ಳುವುದು.
- ಕಾರ್ಯಕ್ರಮ ನಡೆಸಬೇಕಾದ ಸ್ಥಳವನ್ನು ಗುರುತಿಸಿ ನಿಗದಿಮಾಡುವುದು.
- ಸ್ಥಳೀಯ ಕಾಲೇಜುಗಳ ಎನ್.ಸಿ.ಸಿ. ಮತ್ತು ಎನ್.ಎಸ್.ಎಸ್. ವಿದ್ಯಾರ್ಥಿಗಳು ತಮ್ಮ ಅಧಿಕಾರಿಗಳ ನೇತೃತ್ವದಲ್ಲಿ ಕಡ್ಡಾಯವಾಗಿ ಜಾಥಾ ಮತ್ತು ಸಮಾವೇಶದಲ್ಲಿ ಪಾಲ್ಗೊಳ್ಳುವುದು.
- ಯುವಜನ ಸೇವಾ ಹಾಗೂ ಕ್ರೀಡಾ ಇಲಾಖೆ, ಕನ್ನಡ ಸಂಸ್ಕೃತಿ ಇಲಾಖೆ, ವಾರ್ತಾ ಇಲಾಖೆ, ಲೋಕ ಶಿಕ್ಷಣ ಇಲಾಖೆ ಸಹಾಯದಿಂದ ಕಾರ್ಯಕ್ರಮವನ್ನು ರೂಪಿಸುವುದು.
- ವಿವಿಧ ಮಟ್ಟದ ನೋಡಲ್ ಅಧಿಕಾರಿಯೊಂದಿಗೆ ಸಹಕಾರ ಮತ್ತು ಸಮನ್ವಯ ಏರ್ಪಡಿಸಿಕೊಳ್ಳುವುದು.
- ಸ್ವಾಮಿ ವಿವೇಕಾನಂದ ಮತ್ತು ಮಹಾತ್ಮಾ ಗಾಂಧೀಜಿಯವರ ಭಾವಚಿತ್ರಗಳನ್ನು ಇಟ್ಟು ಸ್ವಾಮಿ ವಿವೇಕಾನಂದರ ಜಯಂತಿಯನ್ನು ಆಚರಿಸುವುದು.
- ಕಾರ್ಯಕ್ರಮಕ್ಕೆ ಗಣ್ಯರನ್ನು ಆಹ್ವಾನಿಸುವುದು.
- ಶ್ರಮದಾನ ಕಾರ್ಯಕ್ರಮವನ್ನು (ಸಸಿ ನೆಡುವುದರ ಮೂಲಕ) ಜರುಗಿಸುವುದು
- ಕಾರ್ಯಕ್ರಮದಲ್ಲಿ ಭಾವೈಕ್ಯತಾ ಪ್ರತಿಜ್ಞಾ ವಿಧಿಯನ್ನು ಬೋಧಿಸುವುದು.
- ಜಾಥಾ ಮತ್ತು ಸಮಾವೇಶದಲ್ಲಿ ಘೋಷಣಾಫಲಕಗಳನ್ನು ಉಪಯೋಗಿಸುವುದು.
- ವಿವಿಧ ಚಟುವಟಿಕೆಗಳಲ್ಲಿ ಸ್ಪರ್ಧೆಗಳನ್ನು ನಡೆಸಿ, ವಿಜೇತರಿಗೆ ದೇಶಭಕ್ತಿಗೆ ಹಾಗೂ ಅಹಿಂಸೆಗೆ ಸಂಬಂಧಿಸಿದ ಪುಸ್ತಕಗಳನ್ನು ಬಹುಮಾನಗಳನ್ನಾಗಿ ನೀಡುವುದು.
- ಕಾರ್ಯಕ್ರಮಗಳಲ್ಲಿ ಸ್ಥಳೀಯ ಕಾಲೇಜಿನ ಎಲ್ಲಾ ವಿದ್ಯಾರ್ಥಿಗಳು ಕಡ್ಡಾಯವಾಗಿ ಪಾಲ್ಗೊಳ್ಳುವಂತೆ ಸೂಚಿಸುವುದು.
- ಕಾರ್ಯಕ್ರಮದ ವರದಿಯನ್ನು ಪ್ರಚಾರ ಮಾಹಿತಿ ಮತ್ತು ಛಾಯಾಚಿತ್ರಗಳೊಂದಿಗೆ ಕಾ.ಶಿ.ಇ. ಗೆ ಸಲ್ಲಿಸುವುದು.
- ಸಮಿತಿಯ ಕಾರ್ಯದರ್ಶಿಯವರು ಕಾರ್ಯಕ್ರಮದ ಅನುಷ್ಠಾನ ಮತ್ತು ಆರ್ಥಿಕ ಜವಾಬ್ದಾರಿಗಳನ್ನು ವಹಿಸಿಕೊಳ್ಳುವುದು.
- ವಿವಿಧ ಮಟ್ಟದ ಪದಾಧಿಕಾರಿಗಳ ಮತ್ತು ಸದಸ್ಯರ ದೂರವಾಣಿ ಸಂಖ್ಯೆಗಳನ್ನು ಇಟ್ಟುಕೊಳ್ಳುವುದು.
- ಭಯೋತ್ಪಾದನೆಯ ವಿರುದ್ಧ ಜಾಗೃತಿ ಮೂಡಿಸುವ ಮತ್ತು ಅಭಿಯಾನದ ಉದ್ದೇಶಗಳನ್ನು ಬಿಂಬಿಸುವ ಡಾಕ್ಯುಮೆಂಟರಿ ಚಿತ್ರಗಳನ್ನು ಕನ್ನಡ ಮತ್ತು ಸಂಸ್ಕೃತಿ ಯುವಜನ ಸೇವೆ ಮತ್ತು ಕ್ರೀಡಾ ಇಲಾಖೆಗಳ ಸಹಕಾರದೊಂದಿಗೆ ವಿ.ಸಿ.ಡಿ./ಎಲ್.ಸಿ.ಡಿ. ಗಳ ಪ್ರದರ್ಶನ

ಅನುಬಂಧ–2

**5. ವೇಳಾಪಟ್ಟಿ**

**ಉನ್ನತ ಶಿಕ್ಷಣ ಇಲಾಖೆ ವತಿಯಿಂದ ಸ್ವಾಮಿ ವಿವೇಕಾನಂದರ ಜನ್ಮ ದಿನಾಚರಣೆಯ ಅಂಗವಾಗಿ ಹಮ್ಮಿಕೊಳ್ಳಲಾದ ಭಯೋತ್ಪಾದನಾ ವಿರೋಧಿ ವಿದ್ಯಾರ್ಥಿ ಜಾಗೃತಿ ಅಭಿಯಾನಕ್ಕೆ ಸಂಬಂಧಿಸಿದ ಕಾರ್ಯಕ್ರಮಗಳ ವೇಳಾಪಟ್ಟಿ ವಿವರ**

| ಕ್ರ. ಸಂ. | ವಿಭಾಗಗಳು | ಸಿದ್ಧತಾ ಸಭೆ | ಭಾಷಣಕಾರರ ತರಬೇತಿ/ ಪ್ರಶಿಕ್ಷಣ | ವಿವೇಕನಂದರ ಜಯಂತಿ ಪ್ರತಿಜ್ಞಾ ವಿಧಿ | ಉದ್ಘಾಟನೆ | ಕಾಲೇಜು ಮಟ್ಟದಲ್ಲಿ ಕಾರ್ಯಕ್ರಮ ಸ್ಪರ್ಧೆಗಳು | ತಾಲ್ಲೂಕು ಮಟ್ಟದಲ್ಲಿ ಜಾಥಾ/ಸಭೆ ಸಮಾರಂಭ | ಜಿಲ್ಲಾ ಮಟ್ಟದ ಜಾಥಾ/ಸಭೆ/ ಸ್ಪರ್ಧೆ/ ಸಮಾರಂಭ | ವಿಶ್ವವಿದ್ಯಾಲಯ ಮಟ್ಟದಲ್ಲಿ ಸೆಮಿನಾರ್/ ವಿಚಾರ ಸಂಕಿರಣ | ವಿಭಾಗ ಮಟ್ಟದ ಸಮಾರಂಭ/ ಸಮಾವೇಶ | ಷರಾ |
|---|---|---|---|---|---|---|---|---|---|---|---|
| 1. | ಮಂಗಳೂರು | 03.01.09 | ಸಿ.ಸ.ನಿ. | 12.01.09 | 12.01.09 | ಸಿ.ಸ.ನಿ. | ಸಿ.ಸ.ನಿ. | ಸಿ.ಸ.ನಿ. | ಸಿ.ಸ.ನಿ. | ಸಿ.ಸ.ನಿ. | |
| 2. | ಶಿವಮೊಗ್ಗ | 05.01.09 | 08.01.09 | 12.01.09 | 16.01.09 | 16.01.09 ರಿಂದ 23.01.09 | 23.01.09 ರಿಂದ 31.01.09 | 01.02.09 ರಿಂದ 07.02.09 | 08.02.09 ರಿಂದ 12.02.09 | 4/5/11.02.09 | |
| 3. | ಧಾರವಾಡ | 06.01.09 ಮ್ಯಾಹ್ನ | ಸಿ.ಸ.ನಿ. | 12.01.09 | 13.01.09 | ಸಿ.ಸ.ನಿ. | 13.01.09 ರಿಂದ 20.01.09 | | 21.01.09 | 22/24.01.09 | |
| 4. | ಬೆಳಗಾವಿ | 06.01.09 ಬೆಳಿಗ್ಗೆ | 04.01.09 | 12.01.09 | ಸಿ.ಸ.ನಿ. | 15.01.09 ರಿಂದ 23.01.09 | 24.01.09 | 19.01.09 | ಸಿ.ಸ.ನಿ. | 23.01.09 | |
| 5. | ಮೈಸೂರು | 07.01.09 | 11.01.09 | 12.01.09 | 23.01.09 | ಸಿ.ಸ.ನಿ. | ಸಿ.ಸ.ನಿ. | ಸಿ.ಸ.ನಿ. | ಸಿ.ಸ.ನಿ. | 13.02.09 | |
| 6. | ಗುಲ್ಬರ್ಗಾ | 15.01.09 | ಸಿ.ಸ.ನಿ. | 12.01.09 | 16.01.09 | 16.01.09 ರಿಂದ 05.02.09 | | 23.01.09 ರಿಂದ 06.02.09 | 07.02.09 | 10.02.09 | |
| 7. | ಬೆಂಗಳೂರು ಗ್ರಾಮಾಂತರ | 13.01.09 | ಸಿ.ಸ.ನಿ. | ಸಿ.ಸ.ನಿ. | 23.01.09 | 09.02.09 ರಿಂದ 15.02.09 | | 16.02.09 | ಸಿ.ಸ.ನಿ. | ಸಿ.ಸ.ನಿ. | |
| 8. | ಬೆಂಗಳೂರು ನಗರ | 13.01.09 | 03.2.09 | ಸಿ.ಸ.ನಿ. | 10.02.09 | ಸಿ.ಸ.ನಿ. | ಸಿ.ಸ.ನಿ. | ಸಿ.ಸ.ನಿ. | 13.02.09 | 18.02.09 | |

**ಸೂಚನೆ:** ಕಾರ್ಯಕ್ರಮದಲ್ಲಿ ಸೂಚಿಸಿರುವ ದಿನಾಂಕಗಳು ಬದಲಾವಣೆಗೆ ಒಳಪಟ್ಟಿರುತ್ತದೆ.

ಸಿ.ಸ.ನಿ.:ಸಿದ್ಧತಾ ಸಭೆಯಲ್ಲಿ ನಿರ್ಧರಿಸುವ ದಿನಾಂಕ

ಪಿ.ಆರ್. 350

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಡಾ: ಶಿವಕುಮಾರ್ ಸಿ.ಎನ್. ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಲಕ್ಕವಳ್ಳಿ, ಚಿಕ್ಕಮಗಳೂರು ಇವರನ್ನು ಸೇವೆಯಿಂದ ವಿಮೋಚನೆಗೊಳಿಸುವ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರ ಪತ್ರ ಸಂ: ಜೆಆರ್‌ಓ (2ಎ) 175/2008–09 ದಿನಾಂಕ: 22.01.2008.

**ಪ್ರಸ್ತಾವನೆ:**

ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರು ಮೇಲೆ ಓದಲಾದ ಪತ್ರದಲ್ಲಿ ಡಾ: ಶಿವಕುಮಾರ್ ಸಿ.ಎನ್. ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಲಕ್ಕವಳ್ಳಿ, ತರಿಕೆರೆ ತಾಲ್ಲೂಕು, ಚಿಕ್ಕಮಗಳೂರು ಇವರು ದಿನಾಂಕ: 25.02.2008 ರಂದು ಸರ್ಕಾರಿ ಸೇವೆಗೆ ಸೇರಿರುತ್ತಾರೆ. ಪ್ರಸ್ತುತ, ಸರ್ಕಾರದ ಪೂರ್ವಾನುಮತಿ ಪಡೆಯದೆ ದಿನಾಂಕ: 14.06.2008 ರಂದು ಸ್ನಾತಕೋತ್ತರ ವ್ಯಾಸಂಗಕ್ಕೆ ದಾಖಲಾಗಿದ್ದು, ಸದರಿ ವೈದ್ಯರ ಖಾಯಂಪೂರ್ವ ಸೇವಾವಧಿ ಘೋಷಣೆಯಾಗಿರುವುದಿಲ್ಲ. ಸದರಿ ವೈದ್ಯರು ಖಾಯಂ ಪೂರ್ವ ಸೇವಾ ಅವಧಿಯಲ್ಲಿ ಅನಧಿಕೃತ ಗೈರುಹಾಜರಾಗಿ ಕರ್ತವ್ಯಚ್ಯುತಿ ಎಸಗಿರುವುದರಿಂದ ಪ್ರೊಬೇಷನರಿ ನಿಯಮಗಳ ಪ್ರಕಾರ ಸೇವೆಯಿಂದ ವಿಮೋಚನೆಗೊಳಿಸುವಂತೆ ಸಲ್ಲಿಸಿರುವ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 56 ಹೆಚ್‌ಎಸ್‌ಹೆಚ್ 2009, ಬೆಂಗಳೂರು, ದಿನಾಂಕ: 3ನೇ ಮಾರ್ಚ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಡಾ: ಶಿವಕುಮಾರ್ ಸಿ.ಎನ್. ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಲಕ್ಕವಳ್ಳಿ, ತರಿಕೆರೆ ತಾಲ್ಲೂಕು, ಚಿಕ್ಕಮಗಳೂರು ಇವರು ದಿನಾಂಕ: 14.06.2008 ರಿಂದ ಖಾಯಂ ಪೂರ್ವ ಸೇವಾವಧಿಯಲ್ಲಿ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿ ಕರ್ತವ್ಯಚ್ಯುತಿ ಎಸಗಿರುವುದರಿಂದ ಸದರಿಯವರನ್ನು ಕರ್ನಾಟಕ ನಾಗರೀಕ ಸೇವಾ (ಖಾಯಂಪೂರ್ವ) ನಿಯಮಾವಳಿ 1977ರ ನಿಯಮ 6 ರಡಿಯಲ್ಲಿ ದಿನಾಂಕ: 14.06. 2008 ರಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 848

**ಐ. ಹೇಮನಾಥ್**

ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು–1)

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ಡಿಆರ್‌ಡಿಎ (ಆಡಳಿತ) ಯೋಜನೆ ಲೆಕ್ಕ ಶೀರ್ಷಿಕೆ 2515–00–196–6–06 ಯಡಿ ಅನುದಾನವನ್ನು ಪುನರ್ವಿನಿಯೋಗದ ಮೂಲಕ ಭರಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ ಎಫ್‌ಡಿ 9 ಟಿಎಫ್‌ಪಿ 2005 ದಿನಾಂಕ: 07.04.2005.

**ಪ್ರಸ್ತಾವನೆ:**

ಡಿಆರ್‌ಡಿಎ ಆಡಳಿತ ಯೋಜನೆ ಕೇಂದ್ರ ಪುರಸ್ಕೃತ ಯೋಜನೆಯಾಗಿದ್ದು, ಜಿಲ್ಲೆಯ ಆಡಳಿತಾತ್ಮಕ ವೆಚ್ಚ ಭರಿಸಲು ಯೋಜನೆಯ ಮಾರ್ಗಸೂಚಿ ಕಂಡಿಕೆ 3.5 ರನ್ವಯ ಜಿಲ್ಲೆಗಳಲ್ಲಿನ ತಾಲ್ಲೂಕುಗಳ ಆಧಾರದ ಮೇಲೆ ಕೇಂದ್ರ ಸರ್ಕಾರ ಅನುದಾನವನ್ನು ಬಿಡುಗಡೆ ಮಾಡುತ್ತದೆ. ಇದಕ್ಕನುಗುಣವಾಗಿ ರಾಜ್ಯದ ಪಾಲಿನ ಅನುದಾನ ಬಿಡುಗಡೆ ಮಾಡಬೇಕಾಗಿದೆ. ಕೇಂದ್ರ ಸರ್ಕಾರದ ನಿಗದಿತ ಅನುದಾನಕ್ಕಿಂತ ಹೆಚ್ಚುವರಿ ಅನುದಾನ ಜಿಲ್ಲೆಗಳು ವೆಚ್ಚಮಾಡಿದ್ದಲ್ಲಿ ಹೆಚ್ಚುವರಿ ಅನುದಾನವನ್ನು ಮಾರ್ಗಸೂಚಿ ಕಂಡಿಕೆ 3.3 ರನ್ವಯ ರಾಜ್ಯ ಸರ್ಕಾರವೇ ಭರಿಸಬೇಕಾಗುತ್ತದೆ. ಡಿಆರ್‌ಡಿಎ ಆಡಳಿತ ಯೋಜನೆಯ ಲೆಕ್ಕ ಶೀರ್ಷಿಕೆ 2515–00–196–6–06 ಯಡಿ, 2008–2009ನೇ ಸಾಲಿನ ರಾಜ್ಯದ ಆಯವ್ಯಯದಲ್ಲಿ ಎಲ್ಲಾ ಜಿಲ್ಲಾ ಪಂಚಾಯತಿಗಳಿಗೆ ರಾಜ್ಯದ ಪಾಲಿನ ಒಟ್ಟು ಅನುದಾನ ರೂ.559.76 ಲಕ್ಷಗಳನ್ನು ಹಂಚಿಕೆ ಮಾಡಿದೆ. ಜಿಲ್ಲಾ ಪಂಚಾಯತಿಗಳು ವೇತನ ಪರಿಷ್ಕರಣೆಯ ಬಾಕಿಯನ್ನು 2008–09ನೇ ಸಾಲಿನಲ್ಲಿ ಭರಿಸಬೇಕಾದುದರಿಂದ ಬಿಜಾಪುರ, ಬಳ್ಳಾರಿ, ದಾವಣಗೆರೆ, ದಕ್ಷಿಣ ಕನ್ನಡ, ಗುಲ್ಬರ್ಗ, ಗದಗ್, ಮಂಡ್ಯ, ಮೈಸೂರು, ರಾಯಚೂರು, ಶಿವಮೊಗ್ಗ ಮತ್ತು ತುಮಕೂರು ಜಿಲ್ಲಾ ಪಂಚಾಯತಿಗಳಲ್ಲಿ ಡಿಆರ್‌ಡಿಎ ಆಡಳಿತ ಯೋಜನೆಯಡಿ ರೂ.1,32,22,000 ಅನುದಾನದ ಅವಶ್ಯಕತೆಯಿದ್ದು, ಇದರಲ್ಲಿ ಜಿಲ್ಲೆಗಳಲ್ಲಿ ಲಭ್ಯವಿರುವ ರೂ.71,85,000 ಅನುದಾನ ಹೊರತುಪಡಿಸಿ, ಹೆಚ್ಚುವರಿ ಅನುದಾನ ರೂ.60,37,000 ರ ಅವ್ಯಕತೆ ಇದೆ. ಅವಶ್ಯಕವಿರುವ ರೂ.60,37,000 ಬಾಗಲಕೋಟೆ, ಬೆಂಗಳೂರು ನಗರ, ಬೀದರ್, ಚಿತ್ರದುರ್ಗ, ಧಾರವಾಡ, ಹಾವೇರಿ, ಚಾಮರಾಜನಗರ, ಚಿಕ್ಕಮಗಳೂರು ಮತ್ತು ಉತ್ತರ ಕನ್ನಡ ಜಿಲ್ಲಾ ಪಂಚಾಯತ್‌ಗಳಲ್ಲಿ ಉಳಿತಾಯವಾಗಲಿದ್ದು, ರೂ.60,37,000ಗಳನ್ನು ಕೊರತೆ ಉಂಟಾದ ಜಿಲ್ಲಾ ಪಂಚಾಯತ್‌ಗಳಿಗೆ ಪುನರ್ವಿನಿಯೋಗದ ಮೂಲಕ ನೀಡಬೇಕಾಗಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 1 ಎಸ್‌ಜಿವೈ (ಡಿಆರ್‌ಡಿಎ) 2008 (ಪಿ) ಬೆಂಗಳೂರು, ದಿನಾಂಕ: 7ನೇ ಮಾರ್ಚ್ 2009**

ಡಿಆರ್‌ಡಿಎ ಆಡಳಿತ ಯೋಜನೆಯ ಲೆಕ್ಕ ಶೀರ್ಷಿಕೆ 2515–00–196–6–06 ಯಡಿ 2008–2009ನೇ ಸಾಲಿಗೆ ರಾಜ್ಯ ಸರ್ಕಾರವು ಬಿಜಾಪುರ, ಬಳ್ಳಾರಿ, ದಾವಣಗೆರೆ, ದಕ್ಷಿಣ ಕನ್ನಡ, ಗುಲ್ಬರ್ಗ, ಗದಗ್, ಮಂಡ್ಯ, ಮೈಸೂರು, ರಾಯಚೂರು, ಶಿವಮೊಗ್ಗ ಮತ್ತು ತುಮಕೂರು ಜಿಲ್ಲಾ ಪಂಚಾಯತ್‌ಗಳಿಗೆ ಅಗತ್ಯವಿರುವ ರೂ.60,37,000 ಗಳನ್ನು (ರೂ.ಅರವತ್ತು ಲಕ್ಷದ ಮೂವತ್ತೇಳು ಸಾವಿರ ಮಾತ್ರ) ಬಾಗಲಕೋಟೆ, ಬೆಂಗಳೂರು ನಗರ, ಬೀದರ್, ಚಿತ್ರದುರ್ಗ, ಧಾರವಾಡ, ಹಾವೇರಿ, ಚಾಮರಾಜನಗರ, ಚಿಕ್ಕಮಗಳೂರು ಮತ್ತು ಉತ್ತರ ಕನ್ನಡ ಜಿಲ್ಲಾ ಪಂಚಾಯತ್‌ಗಳಲ್ಲಿ ಉಳಿತಾಯವಾಗುವ ಅನುದಾನದಿಂದ ಪುನರ್ವಿನಿಯೋಗದ ಮೂಲಕ ಭರಿಸಲು ಮಂಜೂರಾತಿ ನೀಡಿದೆ. ವಿವರಗಳನ್ನು ಅನುಬಂಧದಲ್ಲಿ ನೀಡಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ ಎಫ್‌ಡಿ 9 ಟಿಎಫ್‌ಪಿ 2005 ದಿನಾಂಕ: 07.4.2005 ರಲ್ಲಿ ಆಡಳಿತ ಇಲಾಖೆಯ ಕಾರ್ಯದರ್ಶಿಗಳಿಗೆ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಾ: ಶಮ್ಲಾ ಇಕ್ಬಾಲ್**

ನಿರ್ದೇಶಕರು (ಸ್ವಉಕಾ) ಹಾಗೂ ಪ.ನಿ ಸರ್ಕಾರದ ಉಪ ಕಾರ್ಯದರ್ಶಿಗಳು,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ**

**ಯೋಜನೆ : ಡಿಆರ್‌ಡಿಎ ಆಡಳಿತ**

**ಶಾಖೆ : ಸ್ವಯಂ ಉದ್ಯೋಗ ಕಾರ್ಯಕ್ರಮ**

**ಆಯವ್ಯಯ ಪತ್ರದಲ್ಲಿ ಅಥವಾ ಹೆಚ್ಚಿನ ಹಂಚಿಕೆ (ಅಲಾಟ್‌ಮೆಂಟ್) ಗಳಲ್ಲಿ ಉಪಬಂಧ ಕಲ್ಪಿಸಿಲ್ಲದ ಎಲ್ಲಾ ವಿನಿಯೋಗಗಳಿಗೆ ಅಥವಾ ಮಂಜೂರಾತಿಗೆ ಲಗತ್ತಿಸಬೇಕಾದ ಪುನರ್ವಿನಿಯೋಗದ ವಿವರಣೆ**

ವರ್ಷ : 2008–09 (ರೂ. ಲಕ್ಷಗಳಲ್ಲಿ)

| ಮುಂಗಡ ಪತ್ರದ ಪ್ರಧಾನ ಚಿಕ್ಕ ಉಪ ವಿವರವಾದ ಶೀರ್ಷಿಕೆಗಳು 2515–ಇತರೆ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು 00–196–ಜಿಲ್ಲಾ ಪಂಚಾಯತಿಗಳಿಗೆ ಸಹಾಯ ಕಾರ್ಯಕ್ರಮಗಳು 6 – ಜಿಲ್ಲಾ ಪಂಚಾಯತ್ 06 – ಡಿಆರ್‌ಡಿಎ ಆಡಳಿತಾತ್ಮಕ ವೆಚ್ಚ (ಕೇಂದ್ರ ಪುರಸ್ಕೃತ ಯೋಜನೆ) | | ಹೆಚ್ಚಿಸಲು ಪ್ರಸ್ತಾವಿಸಲಾದ ಅಂದಾಜಿನ ಶೀರ್ಷಿಕೆ 2515–00–196–6–06 | | | | ಕಡಿಮೆ ಮಾಡಲು ಪ್ರಸ್ತಾವಿಸಲಾದ ಅಂದಾಜಿನ ಶೀರ್ಷಿಕೆ – 2515–00–196–6–06 | | | | ಷರಾ ಹಣ ಹಂಚಿಕೆ (ಅಲಾಟ್‌ಮೆಂಟ್) ಮೀರಿರುವುದಕ್ಕೆ ಮತ್ತು ಉಳಿತಾಯ ನಿರೀಕ್ಷಿಸುವುದಕ್ಕೆ ಕಾರಣಗಳನ್ನು ಇಲ್ಲಿ ಪೂರ್ಣವಾಗಿ ವಿವರಿಸಬೇಕು. |
|---|---|---|---|---|---|---|---|---|---|---|
| ಜಿಲ್ಲಾ ಕೋಡ್ | ಜಿಲ್ಲಾ ಪಂಚಾಯತ್ | ಮಂಜೂರಾದ ಆಯವ್ಯಯ ಅಂದಾಜಿನಲ್ಲಿರುವ ಮೊತ್ತ | ಈವರೆಗೆ ಆಗಿರುವ ವಾಸ್ತವಿಕ ವೆಚ್ಚ (ಎಂದರೆ) | ವರ್ಷದ ಉಳಿದ ಅವಧಿಯಲ್ಲಿ ಸಂಭವನೀಯ ವೆಚ್ಚ | ಬೇಕಾದ ಹೆಚ್ಚಿನ ಅಲಾಟ್‌ಮೆಂಟ್ ವಿವರ | ಮಂಜೂರಾದ ಆಯವ್ಯಯ ಅಂದಾಜಿನಲ್ಲಿರುವ ಮೊತ್ತ | ಈವರೆಗೆ ಆಗಿರುವ ವಾಸ್ತವಿಕ ವೆಚ್ಚ (ಎಂದರೆ) | ವರ್ಷದ ಉಳಿದ ಅವಧಿಯಲ್ಲಿ ಸಂಭವನೀಯ ವೆಚ್ಚ | ಪುನರ್ವಿನಿಯೋಗಕ್ಕೆ ಲಭ್ಯವಿರುವ ಮೊತ್ತ | |
| 414 | ಬಿಜಾಪುರ | 21.53 | 16.68 | 10.00 | 5.15 | | | | | 11 ಜಿಲ್ಲೆಗಳಲ್ಲಿ ಹೆಚ್ಚುವರಿ ಅನುದಾನ ರೂ.132.22 ಲಕ್ಷ ಬೇಕಿದ್ದು ಈ ಪೈಕಿ ದಾವಣಗೆರೆ, ದಕ್ಷಿಣ ಕನ್ನಡ, ತುಮಕೂರು ಜಿಲ್ಲೆಗಳಲ್ಲಿ ಯೋಜನೆಯಡಿ ಅನುದಾನ ಲಭ್ಯವಿರುವ ಕಾರಣ ರೂ.60.37 ಮಾತ್ರ ಹೆಚ್ಚುವರಿಯಾಗಿ ಬೇಕಾಗಿರುತ್ತದೆ. ಈ ಅನುದಾನವನ್ನು |
| 451 | ದಾವಣಗೆರೆ | 21.53 | 13.90 | 7.63 | 0.00 | | | | | |
| 409 | ದಕ್ಷಿಣ ಕನ್ನಡ | 14.19 | 11.07 | 3.12 | 0.00 | | | | | |
| 412 | ಮಂಡ್ಯ | 26.35 | 16.51 | 11.00 | 1.16 | | | | | |
| 407 | ಮೈಸೂರು | 16.72 | 15.87 | 16.82 | 15.97 | | | | | |
| 420 | ರಾಯಚೂರು | 23.50 | 23.50 | 18.02 | 18.02 | | | | | |
| 405 | ಶಿವಮೊಗ್ಗ | 17.23 | 15.68 | 4.00 | 2.45 | | | | | |
| 406 | ತುಮಕೂರು | 30.30 | 15.28 | 15.02 | 0.00 | | | | | |

| | | | | | | | | | | |
|---|---|---|---|---|---|---|---|---|---|---|
| 418 | ಬಳ್ಳಾರಿ | 24.57 | 6.79 | 22.00 | 4.22 | | | | | ಬಾಗಲಕೋಟೆ, ಬೆಂಗಳೂರು ನಗರ, ಬೀದರ್, ಚಿತ್ರದುರ್ಗ, ಧಾರವಾಡ, ಹಾವೇರಿ, ಚಾಮರಾಜನಗರ, ಚಿಕ್ಕಮಗಳೂರು ಮತ್ತು ಉತ್ತರ ಕನ್ನಡ ಜಿಲ್ಲೆಗಳಿಂದ ಪುರ್ನವಿನಿಯೋಗಕ್ಕಾಗಿ ಭರಿಸಿಕೊಳ್ಳಲಾಗುವುದು. ಕಾರಣ ಈ ಜಿಲ್ಲೆಗಳಿಗೆ ಕೇಂದ್ರ ಸರ್ಕಾರ ನೀಡಿರುವ ಅನುದಾನದ ಅನುಗುಣವಾಗಿ ರಾಜ್ಯದ ಪಾಲಿನ ಒಂದು ಮತ್ತು ಎರಡನೇ ಕಂತಿನ ಅನುದಾನವನ್ನು ಬಿಡುಗಡೆ ಮಾಡಲಾಗಿದೆ. |
| 417 | ಗುಲ್ಬರ್ಗಾ | 21.53 | 10.32 | 24.00 | 12.79 | | | | | |
| 462 | ಗದಗ್ | 13.17 | 13.17 | 0.61 | 0.61 | | | | | |
| | | **230.62** | **158.77** | **132.22** | **60.37** | | | | | |
| 461 | ಬಾಗಲಕೋಟೆ | | | | | 26.35 | 16.46 | 0.00 | 9.89 | |
| 401 | ಬೆಂಗಳೂರು ನಗರ | | | | | 18.24 | 14.21 | 0.00 | 4.03 | |
| 419 | ಬೀದರ್ | | | | | 20.27 | 11.71 | 0.00 | 8.56 | |
| 403 | ಚಿತ್ರದುರ್ಗ | | | | | 27.56 | 17.36 | 0.00 | 10.20 | |
| 415 | ಧಾರವಾಡ | | | | | 24.32 | 15.09 | 0.00 | 9.23 | |
| 463 | ಹಾವೇರಿ | | | | | 16.21 | 10.48 | 0.00 | 5.73 | |
| 456 | ಚಾಮರಾಜನಗರ | | | | | 12.36 | 7.62 | 0.00 | 4.74 | |
| 408 | ಚಿಕ್ಕಮಗಳೂರು | | | | | 20.27 | 13.39 | 3.48 | 3.40 | |
| 416 | ಉತ್ತರ ಕನ್ನಡ | | | | | 17.99 | 13.40 | 0.00 | 4.59 | |
| | | | | | | **183.57** | **119.72** | **3.48** | **60.37** | |

**ಡಾ: ಶಮ್ಲಾ ಇಕ್ಬಾಲ್**
ನಿರ್ದೇಶಕರು (ಸ್ವುಕಾ) ಹಾಗೂ ಪ.ನಿ ಸರ್ಕಾರದ ಉಪ ಕಾರ್ಯದರ್ಶಿಗಳು,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

ಪಿ.ಆರ್. 847

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಡಾ: ಬಿ.ರವಿ, ಮಕ್ಕಳ ತಜ್ಞರು, ಸಾರ್ವಜನಿಕ ಆಸ್ಪತ್ರೆ, ಹೊಸದುರ್ಗ, ಚಿತ್ರದುರ್ಗ ಜಿಲ್ಲೆ ಇವರನ್ನು ಸೇವೆಯಿಂದ ವಿಮೋಚನೆಗೊಳಿಸುವ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರ ಪತ್ರ ಸಂ: ಡಿಪಿಜಿ/ ಬೆಂವಿ2/ಜಿ/09/2007–08 ದಿನಾಂಕ: 17/11/97 ಮತ್ತು 23.12.2008.

**ಪ್ರಸ್ತಾವನೆ:**

ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರು ಮೇಲೆ ಓದಲಾದ ಪತ್ರಗಳಲ್ಲಿ ಡಾ: ಬಿ.ರವಿ, ಮಕ್ಕಳ ತಜ್ಞರು, ಸಾರ್ವಜನಿಕ ಆಸ್ಪತ್ರೆ, ಹೊಸದುರ್ಗ, ಚಿತ್ರದುರ್ಗ ಜಿಲ್ಲೆ ಇವರು ದಿನಾಂಕ: 20.02.2006 ರಿಂದ 05.04.2006 ರ ವರೆಗೆ ಸಂಯುಕ್ತ ರಜೆಯ ಮೇಲೆ ತೆರಳಿದ್ದು, ದಿನಾಂಕ: 06.04.2006 ರಂದು ಕರ್ತವ್ಯಕ್ಕೆ ಹಾಜರಾಗಿರುತ್ತಾರೆ. ನಂತರ ದಿನಾಂಕ: 07.04.2006 ರಂದು ಸಾಂದರ್ಭಿಕ ರಜೆಯ ಮೇಲೆ ತೆರಳಿ, ತದನಂತರ ಕರ್ತವ್ಯಕ್ಕೆ ಹಾಜರಾಗದೇ, ಯಾವುದೇ ರಜೆ ಅರ್ಜಿಯನ್ನು ಸಲ್ಲಿಸದೇ ಅನಧಿಕೃತ ಗೈರುಹಾಜರಾಗಿರುತ್ತಾರೆ. ಈ ಸಂಬಂಧ ನೀಡಿರುವ ನೋಟೀಸು/ ಪತ್ರಿಕಾ ಪ್ರಕಟಣೆಗಳಿಗೆ ಯಾವುದೇ ಪ್ರತಿಕ್ರಿಯೆ ನೀಡಿರುವುದಿಲ್ಲ. ಆದ್ದರಿಂದ ಸದರಿ ವೈದ್ಯರನ್ನು ಪ್ರೊಬೆಷನರಿ ನಿಯಮ 1977 ರ ನಿಯಮ 6(2)ರ ಪ್ರಕಾರ ದಿನಾಂಕ: 07/04/2006 ರಿಂದ ಜಾರಿಗೆ ಬರುವಂತೆ ಸೇವೆಯಿಂದ ವಿಮೋಚನೆಗೊಳಿಸುವ ಕುರಿತು ಸಲ್ಲಿಸಿರುವ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 672 ಹೆಚ್ಎಸ್ಹೆಚ್ 2008, ಬೆಂಗಳೂರು, ದಿನಾಂಕ: 3ನೇ ಮಾರ್ಚ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಡಾ: ಬಿ.ರವಿ, ಮಕ್ಕಳ ತಜ್ಞರು, ಸಾರ್ವಜನಿಕ ಆಸ್ಪತ್ರೆ, ಹೊಸದುರ್ಗ, ಚಿತ್ರದುರ್ಗ ಜಿಲ್ಲೆ ಇವರು ದಿನಾಂಕ: 07/04/2006 ರಿಂದ ಖಾಯಂ ಪೂರ್ವ ಸೇವಾವಧಿಯಲ್ಲಿ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿ ಕರ್ತವ್ಯಚ್ಯುತಿ ಎಸಗಿರುವುದರಿಂದ ಸದರಿಯವರನ್ನು ಕರ್ನಾಟಕ ನಾಗರೀಕ ಸೇವಾ (ಖಾಯಂಪೂರ್ವ) ನಿಯಮಾವಳಿ 1977ರ ನಿಯಮ 6 ರಡಿಯಲ್ಲಿ ದಿನಾಂಕ: 07.04.2006 ರಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಿದೆ

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಐ. ಹೇಮನಾಥ್**

ಪಿ.ಆರ್. 849

ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು–1)

## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

**ವಿಷಯ:** ಪಿ.ಪಿ.ಪಿ ಪ್ರಾಜೆಕ್ಟ್ ಪ್ರಕಟಣೆಯನ್ನು ಕರ್ನಾಟಕ ರಾಜ್ಯ ಪತ್ರದಲ್ಲಿ ಮಾಡುವುದಕ್ಕೆ ಸಂಬಂಧಿಸಿದಂತೆ ಸಂಕಲನಾಧಿಕಾರಿ, ಕರ್ನಾಟಕ ರಾಜ್ಯ ಪತ್ರ ವಿಭಾಗ ಇವರಿಗೆ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ಕರ್ನಾಟಕ ರಾಜ್ಯ ಪತ್ರದ ಸಂಕಲನಾಧಿಕಾರಿಗಳ ಪರವಾಗಿ ಬರೆದಿರುವ ಪತ್ರ ಸಂ.ಜಿ1607/08–09 ದಿನಾಂಕ: 22.01.09.

**ಪ್ರಸ್ತಾವನೆ:**

ದಿನಾಂಕ: 18.6.07ರ ಆದೇಶದಲ್ಲಿ ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಯಲ್ಲಿ ಪಿಪಿಪಿ ಕೋಶವನ್ನು ಪ್ರಧಾನ ಕಾರ್ಯದರ್ಶಿ, ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ನಿರ್ದೇಶಕರು ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ ಹಾಗೂ ತಜ್ಞರನ್ನೊಳಗೊಂಡಂತೆ ರಚಿಸಲು ಅನುಮೋದನೆಯನ್ನು ನೀಡಲಾಗಿದೆ. ಈ ಕೋಶವು ನಿರ್ವಹಿಸಬಹುದಾದ ಕಾರ್ಯಗಳನ್ನು ಸಹ ಸದರಿ ಆದೇಶದಲ್ಲಿ ತಿಳಿಸಿ ಪಿಪಿಪಿ ಯೋಜನೆಗೆ ಸಂಬಂಧಿಸಿದ ಪ್ರಸ್ತಾವನೆಗಳನ್ನು ಸ್ವೀಕರಿಸಿ ಅದನ್ನು ಏಕಗವಾಕ್ಷಿಯ ಸಮಿತಿಯ ಮುಂದೆ ಪರಿಗಣನೆಗೆ ತರಲು ಅನುಮೋದನೆಯನ್ನು ನೀಡಲಾಗಿದೆ. ಪಿ.ಪಿ.ಪಿ. ಯೋಜನೆಗಳನ್ನು ಪಿ.ಪಿ.ಪಿ. ಕೋಶದ ಮೂಲಕ ಅನುಷ್ಠಾನ ಕಲ್ಪಿಸಲು ಅವಕಾಶ ನೀಡಿದೆ.

2. Transaction Advisor ಸಂಬಂಧಿತ ಅಧಿಸೂಚನೆ ಹಾಗೂ ಮಾರ್ಗಸೂಚಿಗಳನ್ನು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಲು ರೂ.15,000/–ಗಳನ್ನು ಪಾವತಿಸಲು ಉಲ್ಲೇಖಿತ ಪತ್ರದಲ್ಲಿ ಸಂಕಲನಾಧಿಕಾರಿ, ಕರ್ನಾಟಕ ರಾಜ್ಯ ಪತ್ರ ಇವರು ಕೋರಿರುತ್ತಾರೆ.

4. ಪ್ರಸ್ತಾವನೆಯಲ್ಲಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಮೂಅಇ 12 ಮೂಇವಿ 2009, ಬೆಂಗಳೂರು, ದಿನಾಂಕ: 9ನೇ ಮಾರ್ಚ್ 2009**

ಪಿಪಿಪಿ ಯೋಜನೆ ಪ್ರಕಟಣೆಯ ಬಿಲ್ಲಿನ ಮೊತ್ತ ರೂ.15,000/–ಗಳನ್ನು ಸಂಕಲನಾಧಿಕಾರಿ, ಕರ್ನಾಟಕ ರಾಜ್ಯ ಪತ್ರ ವಿಭಾಗ ಈ ಸಂಸ್ಥೆಗೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಿದೆ.

2. ಈ ಮೊತ್ತವನ್ನು 2008–09ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ 3451–00–090–1–06 (Infrastructure Preliminary Study-other expenditure) ಇದರಡಿ ಒದಗಿಸಿರುವ ರೂ.100.00 ಲಕ್ಷದಿಂದ ಬಿಡುಗಡೆ ಮಾಡಲಾಗಿದೆ.

3. ಈ ಮೊತ್ತವನ್ನು ನಿರ್ದೇಶಕರು, ತಾಂತ್ರಿಕ ಕೋಶ, ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ ಇವರು ಸರ್ಕಾರದ ಅಧೀನ ಕಾರ್ಯದರ್ಶಿ, ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ, ಇವರ ಮೇಲು ರುಜುವಿನೊಂದಿಗೆ ಖಜಾನೆಯಿಂದ ಡ್ರಾ ಮಾಡಲು ಅನುಮೋದನೆ ನೀಡಿದೆ.

4. ಈ ಆದೇಶವನ್ನು ದಿನಾಂಕ: 16.5.08ರ ಆದೇಶ ಸಂ. FD 1 TFP 2008 ರಡಿ ಇಲಾಖೆಯ ಕಾರ್ಯದರ್ಶಿಗಳಿಗೆ ನೀಡಿರುವ ಆರ್ಥಿಕ ಅಧಿಕಾರ ಪ್ರತ್ಯಾಯೋಜನೆಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 850

**ಎನ್. ಮಂಜುಳಗೀತ**

ಸರ್ಕಾರದ ಅಧೀನ ಕಾರ್ಯದರ್ಶಿ, ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ.

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ:** ಚಿತ್ರದುರ್ಗ ಜಿಲ್ಲೆ ಚಳ್ಳಕೆರೆ ತಾಲ್ಲೂಕಿನ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು, ಇವರ ಪತ್ರಸಂಖ್ಯೆ: ಮುಇಂ/ರಶಾ/ಸಇಂ3/2008–09, ದಿನಾಂಕ: 17.01.2009.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರು ಚಿತ್ರದುರ್ಗ ಜಿಲ್ಲೆ ಚಳ್ಳಕೆರೆ ತಾಲ್ಲೂಕಿನ ಈ ಕೆಳಕಂಡ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ ನಿಗದಿತ ನಮೂನೆಯಲ್ಲಿ ಅಗತ್ಯ ನಕ್ಷೆಯೊಂದಿಗೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

| ಕ್ರ ಸಂ. | ಗ್ರಾಮೀಣ ರಸ್ತೆಗಳ ವಿವರ | ಕಿ.ಮೀ. ಗಳಲ್ಲಿ |
|---|---|---|
| 1. | ನಾಯಕನಹಟ್ಟಿ–ತೊರೆಕೋಲಮ್ಮನಹಳ್ಳಿ | 10.50 |
| 2. | ಎಸ್.ಜೆ.ರಸ್ತೆಯಿಂದ ಗೌರಸಮುದ್ರ ಆಂದ್ರಗಡಿ ಮಾರ್ಗ ಮನ್ನೆಕೋಟೆ, ಬಂಜಿಗೆರೆ, ಘಟಪರ್ತಿ, ಮಲ್ಲಸಂದ್ರ ರಸ್ತೆ | 31.60 |
| 3. | ತಳಕು–ದೇವರೆಡ್ಡಿಹಳ್ಳಿ, ದೇವರಹಳ್ಳಿ, ಆಂದ್ರಗಡಿ ರಸ್ತೆ | 21.00 |
| 4. | ಹಿರೇಹಳ್ಳಿ, ಕೊಂಡ್ಲಹಳ್ಳಿ ರಸ್ತೆ | 12.00 |
| 5. | ನಾಯಕನಹಟ್ಟಿ–ಜಗಳೂರು ಗಡಿ ರಸ್ತೆ | 9.50 |
| 6. | ಗೋಪನಹಳ್ಳಿ–ಚಿಕ್ಕಮಧುರೆ ರಸ್ತೆ ಮಾರ್ಗ ಗಂಜಿಗುಂಟೆ | 13.00 |
| 7. | ಕರೀಕೆರೆ–ಚಿತ್ರನಾಯಕನಹಳ್ಳಿ ಮಾರ್ಗ ಕಾಲುವೇಹಳ್ಳಿ, ಯಾದಲಗಟ್ಟೆ | 14.00 |
| 8. | ಕೆ.ಕೆ.ರಸ್ತೆಯಿಂದ ನಾರಾಯಣಪುರ ರಸ್ತೆ ಮಾರ್ಗ ಸೂರನಹಳ್ಳಿ ವಡೇರಹಳ್ಳಿ ಬೊಂಬೇರಹಳ್ಳಿ, ಯಲಗಟ್ಟ ರಸ್ತೆ | 15.00 |
| 9. | ಪುರ್ಲಹಳ್ಳಿಯಿಂದ ಯಾದಲಗಟ್ಟೆ ಮಾರ್ಗ ಚನ್ನಮ್ಮನಾಗತಿಹಳ್ಳಿ, ಕ್ಯಾತಗೊಂಡನಹಳ್ಳಿ ರಸ್ತೆ | 17.00 |
| 10. | ಕೆ.ಕೆ.ರಸ್ತೆಯಿಂದ ಬೊಂಬೇರಹಳ್ಳಿ ಮಾರ್ಗ ಕಸ್ತೂರಿತಿಮ್ಮನಹಳ್ಳಿ ದೇವರಮರಿಕುಂಟೆ | 12.60 |
| 11. | ಜಾಜೂರಿನಿಂದ ಕೊರ್ಲಕುಂಟೆ ಮಾರ್ಗ ಹರವಿಗೊಂಡನಹಳ್ಳಿ ವೃಂದಾವನಹಳ್ಳಿ | 20.00 |
| 12. | ಚಳ್ಳಕೆರೆ ರಸ್ತೆಯಿಂದ ಕರೀಕೆರೆ ಮಾರ್ಗ ಭರಮಸಾಗರ, ರಂಗವ್ವನಹಳ್ಳಿ | 15.00 |
| 13. | ನಾಗಪ್ಪನಹಳ್ಳಿಗೇಟ್ (ಕೆ.ಕೆ.ರಸ್ತೆ) ಯಿಂದ ಆಂದ್ರಗಡಿ ಮಾರ್ಗ ಪಿ.ಮಹದೇವಪುರ | 6.50 |
| | **ಒಟ್ಟು** | **197.70** |

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು, ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಲೋಇ 120 ಸಿಆರ್‌ಎಂ 2009, ಬೆಂಗಳೂರು, ದಿನಾಂಕ: 28ನೇ ಫೆಬ್ರವರಿ 2009**

ಚಿತ್ರದುರ್ಗ ಜಿಲ್ಲೆ ಚಳ್ಳಕೆರೆ ತಾಲ್ಲೂಕಿನ ಒಟ್ಟು 197.70 ಕಿ.ಮೀ. ಉದ್ದದ ಈ ಕೆಳಕಂಡ 13 ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆ ನೀಡಲಾಗಿದೆ.

| ಕ್ರ ಸಂ. | ಗ್ರಾಮೀಣ ರಸ್ತೆಗಳ ವಿವರ | ಕಿ.ಮೀ. ಗಳಲ್ಲಿ |
|---|---|---|
| 1. | ನಾಯಕನಹಟ್ಟಿ–ತೊರೆಕೋಲಮ್ಮನಹಳ್ಳಿ | 10.50 |
| 2. | ಎಸ್.ಜೆ.ರಸ್ತೆಯಿಂದ ಗೌರಸಮುದ್ರ ಆಂದ್ರಗಡಿ ಮಾರ್ಗ ಮನ್ನೆಕೋಟೆ, ಬಂಜಿಗೆರೆ, ಘಟಪರ್ತಿ, ಮಲ್ಲಸಂದ್ರ ರಸ್ತೆ | 31.60 |

| ಕ್ರ. ಸಂ. | ಗ್ರಾಮೀಣ ರಸ್ತೆಗಳ ವಿವರ | ಕಿ.ಮೀ. ಗಳಲ್ಲಿ |
|---|---|---|
| 3. | ತಳಕು–ದೇವರೆಡ್ಡಿಹಳ್ಳಿ, ದೇವರಹಳ್ಳಿ, ಆಂದ್ರಗಡಿ ರಸ್ತೆ | 21.00 |
| 4. | ಹಿರೇಹಳ್ಳಿ, ಕೊಂಡ್ಲಹಳ್ಳಿ ರಸ್ತೆ | 12.00 |
| 5. | ನಾಯಕನಹಟ್ಟಿ–ಜಗಳೂರು ಗಡಿ ರಸ್ತೆ | 9.50 |
| 6. | ಗೋಪನಹಳ್ಳಿ–ಚಿಕ್ಕಮಧುರೆ ರಸ್ತೆ ಮಾರ್ಗ ಗಂಜಿಗುಂಟೆ | 13.00 |
| 7. | ಕರೀಕೆರೆ–ಚಿತ್ರನಾಯಕನಹಳ್ಳಿ ಮಾರ್ಗ ಕಾಲುವೇಹಳ್ಳಿ, ಯಾದಲಗಟ್ಟೆ | 14.00 |
| 8. | ಕೆ.ಕೆ.ರಸ್ತೆಯಿಂದ ನಾರಾಯಣಪುರ ರಸ್ತೆ ಮಾರ್ಗ ಸೂರನಹಳ್ಳಿ ವಡೇರಹಳ್ಳಿ ಬೊಂಬೇರಹಳ್ಳಿ, ಯಲಗಟ್ಟ ರಸ್ತೆ | 15.00 |
| 9. | ಪುರ್ಲಹಳ್ಳಿಯಿಂದ ಯಾದಲಗಟ್ಟೆ ಮಾರ್ಗ ಚನ್ನಮ್ಮನಾಗತಿಹಳ್ಳಿ, ಕ್ಯಾತಗೊಂಡನಹಳ್ಳಿ ರಸ್ತೆ | 17.00 |
| 10. | ಕೆ.ಕೆ.ರಸ್ತೆಯಿಂದ ಬೊಂಬೇರಹಳ್ಳಿ ಮಾರ್ಗ ಕಸ್ತೂರಿತಿಮ್ಮನಹಳ್ಳಿ ದೇವರಮರಿಕುಂಟೆ | 12.60 |
| 11. | ಜಾಜೂರಿನಿಂದ ಕೊರ್ಲಕುಂಟೆ ಮಾರ್ಗ ಹರವಿಗೊಂಡನಹಳ್ಳಿ ವೃಂದಾವನಹಳ್ಳಿ | 20.00 |
| 12. | ಚಳ್ಳಕೆರೆ ರಸ್ತೆಯಿಂದ ಕರೀಕೆರೆ ಮಾರ್ಗ ಭರಮಸಾಗರ, ರಂಗವ್ವನಹಳ್ಳಿ | 15.00 |
| 13. | ನಾಗಪ್ಪನಹಳ್ಳಿಗೇಟ್ (ಕೆ.ಕೆ.ರಸ್ತೆ) ಯಿಂದ ಆಂದ್ರಗಡಿ ಮಾರ್ಗ ಪಿ.ಮಹದೇವಪುರ | 6.50 |
| | **ಒಟ್ಟು** | **197.70** |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಆರ್. ರೇವಣ್ಣ**

ಪಿ.ಆರ್. 851 ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ (ಸಂಪರ್ಕ).

## FOREST, ECOLOGY AND ENVIRONMENT SECRETARIAT

**Sub:** Constitution of Tiger Conservation Foundation under Section 38X of the Wildlife Protection Act 1972.

**Read:**
1. Ministry of Environment & Forests, Government of India, New Delhi, Notification dt: 22.06.2007.
2. Principal Chief Conservator of Forests (WL) letter No: C1/CWL/CR-61/2006-07, dt: 20.08.2007.
3. Proceedings of the meeting dt: 28.11.2007.
4. Government Order No, FEE 104 FWL 2007, dt: 13.2.2007.
5. Principal Chief Conservator of Forests (WL) letter No: C1/CWL/CR-61/2006-07, dt: 07.02.2008 & 30.07.2008.

**Preamble:**

In the Notification read at (1) above, Government of India has issued guidelines for the purpose of regularization of Tiger Conservation Foundation under Section 38X of the Wildlife Protection Act 1972. The Principal Chief Conservator of Forests (WL) in his letter read at (2) above has sent a proposal to Government and requested to convene a meeting to discuss the formation of Tiger Conservation Foundations in the State.

In proceedings read at (3) above, this issues were discuss in the meeting convened by the Principal Secretary, Forest, Ecology & Environment Department on 28.11.2007, it was decided to constitute Tiger Conservation Foundations in the State, in accordance with guidelines issued in the Government of India.

In the Government Order read at (4) above, the Governing Body of the Foundation and the individual Executive Committees for the Tiger Conservation Foundations i.e. for Bandipur-Nagarhole Conservation Reserve, Badra Tiger Conservation Reserve and Anshi-Dandeli Tiger Conservation Reserve have been constituted.

In the Principal Chief Conservator of Forests (WL) read at (5) above, he has requested to issue suitable orders duly incorporating the names of members (like two prominent scientists or qualified

experts in the field and two members of the Executive Committees of the Foundations) for the Governing Body of the Foundation.

Government have examined the issues in detail and the following orders are issued.

**G.O.No. FEE 104 FWL 2007 P1, Bangalore, Dated: 2nd March 2009**

In continuation of Government Order read at (4) above, Government is pleased constitutes with immediate effect, the Governing Body and Executive Committees for Tiger Foundation for Bandipur-Nagarhole Tiger Conservation Reserve, Bhadra Tiger Conservation Reserve and Anshi-Dandeli Tiger Conservation Reserve consisting of following members namely:-

**Governing Body of the Foundation**

| | | |
|---|---|---|
| 1. | Hon'ble Minister for Forest, Ecology & Environment Department. | President |
| 2. | Principal Secretary, Forest, Ecology & Environment Department. | Vice-President |
| 3. | Principal Chief Conservator of Forests | Member |
| 4. | Chif Conservation Forest (Project Tiger) Mysore | Member |
| 5. | Conservator of Forests, Chikkamagalur | Member |
| 6. | Conservator of Forests, Kenara Circle, Shirasi | Member |
| 7. | Deputy Conservator of Forests, Hunsur Wildlife Division, Hunsur | Member |
| 8. | Deputy Conservator of Forests, Bandipur Tiger Reserve, Bandipur | Member |
| 9. | Deputy Conservator of Forests, Bhadra Wildlife Division, Chikkamagalur | Member |
| 10. | Deputy Conervator of Forests, Wildlife Division Dandeli, Uttara Kannada District | Member |
| 11. | Dr. K. Ullas Karanth | Member |
| 12. | Dr. V.J.T. Jonhnsingh | Member |
| 13. | Member of Legislative Assembly Virajpet | Member |
| 14. | Member of Legislative Assembly, Gokak | Member |
| 15. | Sri Mohamed Fazullaia, Zillapanchayat Member, Hegodu Zilla Panchayat Constituency, Mysore District | Member |
| 16. | Smt Ragasundaresh W/o late B.K. Sundaresh, ZP Member, Shankara pura, Chikkamagalur | Member |
| 17. | Sri Vilas Chandru Nayak, ZP Member, Joida Tq. Ramnagar, UK District | Member |
| 18. | Sri H.B. Puttegowda, President, Kottanahalli Eco-development Committee, Kottanalli, H.D.Kote Tq. | Member |
| 19. | Smt. Gujjamma, President, Chennikatte Tribal Colony Eco-development Committee Gundlupet Tq. | Member |
| 20. | Sri Gopal Bhat, Markandeshwara Eco-development Committee, Khanolya, Sangameshwarpet, Chikkamagalur | Member |
| 21. | Sri Hemala Nayak, President Kalpataru Eco-development Committee, Thanige byle wildlife range, Chikkamagalur | Member |
| 22. | Smt Sandya P.Desai, Eco-development Committee, Kalasai, Kumbarawada wildlife range | Member |
| 23. | Sri Nandu L.Teli, Phansoli Eco-development Committee, Phansoli wildlife range | Member |
| 24. | Chief Wildlife Warden, Bangalore | Member Secretary |

The tenure of the nominated members shall be for the period of three years from the date of nominations.

The Member of Governing Body shall upon ceasing to be a Member of Legislative Assembly or, as the case may be, the district panchayat, cease to be a member of the Governing Body.

Three Tiger Conservation Foundation in Karnataka are here by established as under.

1. Bhandipur-Nagarhole Conservation Foundation with its office in Bandipur.
2. Bhadra Tiger Conservation Foundation with its office in Shimoga.

3. Anshi-Dandeli Tiger Conservation Foundation with its office in Dandeli.

An executive Committee for each of the above Conservation Foundation is constituted, with shall consist of:-

**I. Bandipur-Nagarhole Tiger Conservation Foundation**

| | | |
|---|---|---|
| 1. | Chief Conservator of Forests (Project Tiger), Mysore | Chairperson |
| 2. | Deputy, Conservator of Forersts, Hunsur Wildlife Division, Hunsur. | Member Secretary |
| 3. | Range Forest Officer, Forest Tiger, Virana Hosahalli wildlife range, Veerana Hosahalli, Hunsur Tq. | Member |
| 4. | Sri H.B. Puttegowda, President, Kottanahalli Eco-development Committee, Kottanalli, H.D.Kote Tq. | Member |
| 5. | Smt Gujjamma, President, Chennikatte Tribal Colony, Eco-development Committee Gundlupet Tq. | Member |
| 6. | Forester-cum-Secretary, Metiguppe, Eco-development Committee, Metiguppe wildlife range metiguppe | Member |

**II. Bhadra Wildlife Conservation Foundation**

| | | |
|---|---|---|
| 1. | Field Director & Conservator of Forests, Chikkamagalur District, Chikkamagalur | Chairperson |
| 2. | Deputy Conservator of Forests, Bhadra Wildlife Division, Chikkamagalur | Member Secretary |
| 3. | Sri Gopal Bhat, Markandeshwara Eco-development Committee, Khanolya, Sangameshwarpet, Chikkamagalur | Member |
| 4. | Sri Hemala Nayak, President Kalpataru Eco-development Committee, Thanige byle wildlife range, Chikkamagalur | Member |
| 5. | Range Forest Officer, Muttodi wildlife range, Chikkamagalur sub-division | Member |
| 6. | Forester, Jakkavalli wildlife range | Member |

**III. Dandeli-Anshi Tiger Conservation Foundation**

| | | |
|---|---|---|
| 1. | Field Director and the Conservator of Forests, Canara Circle, Sirsi | Chairperson |
| 2. | Deputy Conservator of Forests, Dandeli wildlife division, Dandeli | Member Secretary |
| 3. | Smt Sandya P.Desai, Eco-evelopment Committee, Kalasai, Kumbarawada wildlife range | Member |
| 4. | Sri Nandu L.Teli, Phansoli Eco-development Committee, Phansoli wildlife range | Member |
| 5. | Range Forest Officer, Wildlife Range, Kulgi | Member |
| 6. | Section Forester, Gundu Wildlife Range | Member |

The Deputy Conservator of Forests or, as the case may be, the Range Forest Officer of the Tiger Reserve shall function as the Secretary of the Executive Committee.

The tenure of the nominated members shall be for a period of two years from the date of his nomination.

The member of the Executive Committee, other than nominated members, shall cease to be member as such, if he ceases to holds offices or post by virtue of which he became the member of the Committee.

The powers and the functions of the Governing Body and the Executive Committee and the procedures and regulation of the Tiger Conservation Foundation is as indicated in the Government of India Notification read at (1) above.

By Order and in the name of the Governor of Karnataka,

**H.M. MALLIKARJUNASWAMY**

Under Secretary to Government,

Forest, Ecology & Environment Department.

P.R. 855

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** ಶಿವಮೊಗ್ಗ ಜಿಲ್ಲೆ, ಶಿಕಾರಿಪುರ ತಾಲ್ಲೂಕು ಕೊರಟಗೆರೆ ಊರಮುಂದಿನ ಕೆರೆ ಅಭಿವೃದ್ಧಿ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ಸನೀಇ 10 ನಯೋಕಾ 2007, ದಿನಾಂಕ 13/05/2008.
2. ದಿನಾಂಕ 27/12/2008ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ಪತ್ರ ಸಂಖ್ಯೆ: ಮುಸದ/ತಾಂಸ-3/ಸಇಂ-8/ಶಿವಮೊಗ್ಗ/ಟೆಂಡರ್/ 2008-09/4542.
3. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ದಿನಾಂಕ 21/01/2009ರ ಪತ್ರ ಸಂಖ್ಯೆ: ಮುಸದ/ಆಪ್ತಶಾಖೆ/ಟೆಂಡರ್/08-09/191.

**ಪ್ರಸ್ತಾವನೆ:**

ಹೆಚ್ಚಿನ ಆತ್ಮಹತ್ಯೆಗಳು ವರದಿಯಾಗಿರುವ ಜಿಲ್ಲೆಗಳಲ್ಲಿ ರೈತರ ಪುನರ್ವಸತಿಗಾಗಿ ವಿಶೇಷ ಪ್ಯಾಕೇಜ್‌ನಡಿ ಕಾಮಗಾರಿಗಳನ್ನು ಕೈಗೊಳ್ಳುವ ಬಗ್ಗೆ ಸರ್ಕಾರದ ಆದೇಶ ಸಂಖ್ಯೆ:ಸನೀಇ 10 ನಯೋಕಾ 2007, ದಿನಾಂಕ 13/05/2008ರಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಿರುವ 162 ಕಾಮಗಾರಿಗಳ ಪೈಕಿ 29.30 ಲಕ್ಷ ರೂ.ಗಳ ಅಂದಾಜು ವೆಚ್ಚದ ಶಿಕಾರಿಪುರ ತಾಲ್ಲೂಕು ಕೊರಟಗೆರೆ ಊರಮುಂದಿನ ಕೆರೆ ಅಭಿವೃದ್ಧಿ ಕಾಮಗಾರಿಯು ಸಹ ಸೇರಿದೆ. ಈ ಕಾಮಗಾರಿಗೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ರವರು ಸಿಇಆರ್ ಸಂ:11/2008-09ರಲ್ಲಿ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಶಿವಮೊಗ್ಗ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| 1 | ಶಿವಮೊಗ್ಗ ಜಿಲ್ಲಾ ಟೆಂಡರ್ ಬುಲೆಟಿನ್ | ದಿ:07/06/2008 |
| 2 | ಸಂಯುಕ್ತ ಕರ್ನಾಟಕ ದಿನಪತ್ರಿಕೆ | ದಿ:13/06/2008 |

ಕಾರಣಾಂತರಗಳಿಂದ ಈ ಟೆಂಡರ್‌ನ್ನು ಹಲವಾರು ಬಾರಿ ಮುಂದೂಡಿ ಅಂತಿಮವಾಗಿ ದಿನಾಂಕ 19/09/08ರಂದು ಅಧಿಸೂಚನೆ ಹೊರಡಿಸಲಾಗಿದೆ. ಈ ಟೆಂಡರ್ ಕರೆಗೆ ಪ್ರತಿಕ್ರಯಿಸಿ ಇಬ್ಬರು ಗುತ್ತಿಗೆದಾರರು ಖಾಲಿ ಟೆಂಡರ್ ಫಾರಂಗಾಗಿ ಅರ್ಜಿ ಸಲ್ಲಿಸಿ ಅದರಂತೆ ಟೆಂಡರ್ ಫಾರಂಗಳನ್ನು ಪಡೆದಿದ್ದು, ನಿಗಧಿತ ದಿನದಂದು ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸಿದ್ದಾರೆ. ಈ ಟೆಂಡರ್‌ಗಳನ್ನು ದಿನಾಂಕ 13/10/08ರಂದು ತೆರೆಯಲಾಗಿದೆ. ಇದರಲ್ಲಿ ಗುತ್ತಿಗೆದಾರರು ಟೆಂಡರ್‌ನಲ್ಲಿ ನಮೂದಿಸಿರುವ ದರಗಳ ತುಲನಾತ್ಮಕ ವಿವರ ಕೆಳಕಂಡಂತಿದೆ:

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಹಾಗೂ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳಂತೆ ಟೆಂಡರ್‌ಗೆ ಇಡಲಾದ ಮೊತ್ತ | ರೂ.28,09,870/- |
| ಪ್ರಸಕ್ತ ಮಾರುಕಟ್ಟೆ ದರ ಪರಿಗಣಿಸಿದಂತೆ ಟೆಂಡರ್‌ಗೆ ಇಡಲಾದ ಮೊತ್ತ | ರೂ.28,05,644/- |

| ಕ್ರ. ಸಂ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ (ರೂ.ಗಳಲ್ಲಿ) | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡವಾರು ಹೆಚ್ಚಳ/ಕಡಿಮೆ | ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
|---|---|---|---|---|
| 1 | ಹೆಚ್.ಆರ್. ಯೋಗೇಶಪ್ಪ, 1ನೇ ದರ್ಜೆ ಗುತ್ತಿಗೆದಾರರು. ಶಿಕಾರಿಪುರ | 32,41,305/- | 15.35 ಹೆಚ್ಚು | 15.53 ಹೆಚ್ಚು |
| 2 | ಕೆ. ಚಂದ್ರಶೇಖರಪ್ಪ, 1ನೇ ದರ್ಜೆ ಗುತ್ತಿಗೆದಾರರು, ಶಿವಮೊಗ್ಗ | 33,71,450/- | 19.99 ಹೆಚ್ಚು | 20.17 ಹೆಚ್ಚು |

ಮೇಲೆ ಕ್ರ.ಸಂ.1ರಲ್ಲಿ ಶ್ರೀ ಹೆಚ್.ಆರ್. ಯೋಗೇಶಪ್ಪ, 1ನೇ ದರ್ಜೆ ಗುತ್ತಿಗೆದಾರರು ನಮೂದಿಸಿರುವ ಮೊತ್ತ ರೂ.32,41,305/-ಗಳು ಅತಿ ಕಡಿಮೆ ಮೊತ್ತವಾಗಿದ್ದು, ಇವರು ನಮೂದಿಸಿರುವ ದರಗಳನ್ನು ಚಾಲ್ತಿ ದರಗಳಿಗೆ ಹೋಲಿಸಿದಾಗ

ಶೇಕಡ 15.35ರಷ್ಟು ಹೆಚ್ಚಾಗಿದ್ದು, ಈ ಮೊತ್ತಕ್ಕೆ ಟೆಂಡರ್‌ನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್‌ರವರು ಮೇಲೆ (2)ರಲ್ಲಿ ಓದಲಾದ ದಿನಾಂಕ 27/12/08ರ ಪತ್ರದಲ್ಲಿ ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಗೆ ಸೂಚಿಸಲಾಗಿತ್ತು. ಅದರಂತೆ ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ದಿನಾಂಕ 03/01/2009ರ ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಚಾಲ್ತಿ ದರಪಟ್ಟಿಯ ದರಗಳಿಗೆ ಪರಿಗಣಿಸಿದ ಟೆಂಡರಿಗಿಡಲಾದ ಮೊತ್ತ ರೂ. 28,05,643/–ಗಳ ಮೇಲೆ ಶೇಕಡ 12.00ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 31,42,321/–ಗಳಿಗೆ ಕಾಮಗಾರಿಯನ್ನು ಶ್ರೀ ಹೆಚ್.ಆರ್. ಯೋಗೇಶಪ್ಪ, 1ನೇ ದರ್ಜೆ ಗುತ್ತಿಗೆದಾರರು, ಶಿಕಾರಿಪುರ ಇವರಿಗೆ ವಹಿಸಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುತ್ತಾರೆಂದು ತಿಳಿಸಿ ಟೆಂಡರ್ ಪರಿಶೀಲನಾ ಸಭೆಯ ನಡವಳಿಗಳೊಂದಿಗೆ ಸಮಿತಿಯ ಅಧ್ಯಕ್ಷರೂ ಆದ ಸಣ್ಣ ನೀರಾವರಿ ದಕ್ಷಿಣ ವಲಯದ ಮುಖ್ಯ ಇಂಜಿನಿಯರ್‌ರವರು ಸದರಿ ಟೆಂಡರ್‌ನ್ನು ಅಂಗೀಕರಿಸಲು ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರದ ಅನುಮೋದನೆಗೆ ಶಿಫಾರಸ್ಸು ಮಾಡಿರುತ್ತಾರೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 03 ಕೆಜಿದು 2009, ಬೆಂಗಳೂರು, ದಿನಾಂಕ 24ನೇ ಫೆಬ್ರವರಿ 2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ತಾಲ್ಲೂಕು ಕೊರಟಗೆರೆ ಊರಮುಂದಿನ ಕೆರೆ ಅಭಿವೃದ್ಧಿ ಕಾಮಗಾರಿಯನ್ನು ಮಂಜೂರಾದ ಅಂದಾಜು ಪಟ್ಟಿ ಹಾಗೂ ಚಾಲ್ತಿ ದರಪಟ್ಟಿಯಂತೆ ಪರಿಗಣಿಸಿದ ಟೆಂಡರಿಗೆ ಇಡಲಾದ ಮೊತ್ತ ರೂ. 28,05,643/–ಗಳ ಮೇಲೆ ಶೇಕಡ 12.00ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 31,42,321/–ಗಳಿಗೆ (ಮೂವತ್ತೊಂದು ಲಕ್ಷದ ನಲವತ್ತೆರಡು ಸಾವಿರದ ಮುನ್ನೂರ ಇಪ್ಪತ್ತೊಂದು ರೂ.ಗಳು ಮಾತ್ರ) ಶ್ರೀ ಹೆಚ್.ಆರ್. ಯೋಗೇಶಪ್ಪ, 1ನೇ ದರ್ಜೆ ಗುತ್ತಿಗೆದಾರರು, ಶಿಕಾರಿಪುರ ಇವರಿಗೆ ಕೆಳಕಂಡ ಷರತ್ತುಗಳೊಂದಿಗೆ ಕಾಮಗಾರಿಯನ್ನು ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರ ದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.751

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ವಿಷಯ:** ಬೆಳಗಾಂ ಜಿಲ್ಲೆ, ಅಥಣಿ ತಾಲ್ಲೂಕು, ವಡ್ಡರಟ್ಟಿ ಹತ್ತಿರ ಅಗ್ರಾಣಿ ಹಳ್ಳಕ್ಕೆ ಅಡ್ಡಲಾಗಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ:**

1. ಸರ್ಕಾರದ ಆದೇಶ ಸಂಖ್ಯೆ:ಸನೀಇ 10 ನಯೋಕಾ 2007, ದಿ:13/05/2008.
2. ದಿನಾಂಕ 06/01/09ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರ ಪತ್ರ ಸಂಖ್ಯೆ: ಮುಇಂ/ಸನೀ(ಉ)ವಲಯ/ಬಿಜೆಪಿ/ ಎಇ–1/2008–00/110.
3. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ರವರ ಪತ್ರ ಸಂಖ್ಯೆ: ಮುಸದ/ಆಪ್ತಶಾಖೆ/ಟೆಂಡರ್/08–09/375, ದಿನಾಂಕ 12/02/09.

**ಪ್ರಸ್ತಾವನೆ:**

ಹೆಚ್ಚಿನ ಆತ್ಮಹತ್ಯೆ ವರದಿಯಾಗಿರುವ ರಾಜ್ಯದ ಜಿಲ್ಲೆಗಳಲ್ಲಿ ರೈತರ ಪುರ್ನವಸತಿಗಾಗಿ ವಿಶೇಷ ಪ್ಯಾಕೇಜ್‌ನಡಿ 162 ಕಾಮಗಾರಿಗಳನ್ನು ಕೈಗೊಳ್ಳಲು ಮೇಲೆ (1)ರಲ್ಲಿ ಓದಲಾದ ದಿನಾಂಕ 13/05/08ರ ಸರ್ಕಾರದ ಆದೇಶದಲ್ಲಿ ಅನುಮೋದನೆ ನೀಡಲಾಗಿದೆ. ಈ ಆದೇಶದಲ್ಲಿ 170.00 ಲಕ್ಷ ರೂ.ಗಳ ಅಂದಾಜು ಮೊತ್ತದಲ್ಲಿ ಬೆಳಗಾಂ ಜಿಲ್ಲೆ, ಅಥಣಿ ತಾಲ್ಲೂಕು, ವಡ್ಡರಟ್ಟಿ ಹತ್ತಿರ ಅಗ್ರಾಣಿ ಹಳ್ಳಕ್ಕೆ ಅಡ್ಡಲಾಗಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿ ಸಹ ಸೇರಿದೆ.

4) ತಕ್ಷಣ ಪರಿಷ್ಕೃತ ಅಂದಾಜಿಗೆ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದು ನಂತರ ಕಾಮಗಾರಿಯನ್ನು ಪ್ರಾರಂಭಿಸುವುದು.
5) ಕಾಮಗಾರಿಯ ಅಂದಾಜು ಪಟ್ಟಿಗಳನ್ನು ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿ/ ತಾಂತ್ರಿಕ ಸಮಿತಿಯು ಸಭೆಯಲ್ಲಿ ಮಂಡಿಸಿ ತೀರುವಳಿಯನ್ನು ಪಡೆಯುವುದು.
6) ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999ರ ಅನುಸಾರ ಟೆಂಡರ್ ಕರೆದು ತೆಗೆದುಕೊಳ್ಳತಕ್ಕದ್ದು.
7) ಕಾಮಗಾರಿ ಪೂರ್ಣಗೊಂಡ ಕೂಡಲೇ ಪಿ.ಸಿ.ಆರ್ ವರದಿಯನ್ನು ಸಲ್ಲಿಸತಕ್ಕದ್ದು ಹಾಗೂ ಅವಶ್ಯಕತೆ ಇದ್ದಲ್ಲಿ ಪರಿಷ್ಕೃತ ಅಂದಾಜು ತಯಾರಿಸಿ ಟಿ.ಎ.ಸಿ. ಅನುಮೋದನೆ ಪಡೆದು ಸಂಬಂಧಿಸಿದ ಸಕ್ಷಮ ಅಧಿಕಾರಿಗಳಿಗೆ ಅನುಮೋದನೆಗಾಗಿ ಸಲ್ಲಿಸುವುದು.
8) ಕಾಮಗಾರಿಗೆ ಅಗತ್ಯವಿರುವ ಜಮೀನಿನ ಸ್ವಾಧೀನಕ್ಕಾಗಿ ನಿಯಮಾನುಸಾರ ತಕ್ಷಣ ಭೂಸ್ವಾಧೀನ ಪ್ರಕ್ರಿಯೆ ಪ್ರಾರಂಭಿಸಲು ಕ್ರಮ ಕೈಗೊಳ್ಳತಕ್ಕದ್ದು.
9) ಇ.ಐ.ಆರ್.ಎಲ್/ವರ್ಕ್‌ಸ್ಲಿಪ್‌ಗಳನ್ನು ಸಲ್ಲಿಸಬೇಕಾದಲ್ಲಿ ತಕ್ಷಣವೇ ಸಲ್ಲಿಸತಕ್ಕದ್ದು.
10) ತಾಂತ್ರಿಕ ಮಂಜೂರಾತಿಯನ್ನು ನೀಡುವ ಮೊದಲು ಅಂದಾಜನ್ನು ಮತ್ತೊಮ್ಮೆ ವಿವರವಾಗಿ ಪರಿಶೀಲಿಸುವುದು.
11) ನೀರ ಅಚ್ಚುಕಟ್ಟು ಹೊಂದಿರುವ ಯೋಜನೆಗಳಿಗೆ ನೀರು ಬಳಕೆದಾರರ ಸಂಘವನ್ನು ಸೃಜಿಸಬೇಕು ಹಾಗೂ ನಿರ್ವಹಣೆ ಯನ್ನು ಸದರಿ ಸಂಘಕ್ಕೆ ವಹಿಸತಕ್ಕದ್ದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ: 16/05/2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಲಾದ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ).

**ಅನುಬಂಧ**

**ಸರ್ಕಾರದ ಆದೇಶ ಸಂಖ್ಯೆ ಸನೀಇ 14 ಮಸಾವಿ 2009, (2) ದಿನಾಂಕ 04.02.2009**

**(ಮೊತ್ತ ಲಕ್ಷ ರೂ.ಗಳಲ್ಲಿ) ಹಾಗೂ (ವಿಸ್ತೀರ್ಣ ಹೆಕ್ಟೇರ್‌ಗಳಲ್ಲಿ)**

| ಕ್ರಮ ಸಂಖ್ಯೆ | ಕಾಮಗಾರಿ ಹೆಸರು | ಸ್ವೀಕೃತವಾಗಿರುವ ಅಂದಾಜು ಮೊತ್ತ | ಅನುಬಂಧ–ಇ ವಿವರಗಳು | | ನದಿ ಕೊಳ್ಳ | ಕಾಮಗಾರಿ ಸ್ವರೂಪ | ಹೊಸ ಅಚ್ಚುಕಟ್ಟು | ಪುನರ್ ಸ್ಥಾಪಿಸಲಾಗುವ/ ಸ್ಥಿರೀಕರಿಸುವ ಅಚುಕಟು | ಕಾಮಗಾರಿಯ ಸಂಕ್ಷಿಪ್ತ ವಿವರಗಳು |
|---|---|---|---|---|---|---|---|---|---|
| | | | ಅಂದಾಜು ಮೊತ್ತ | ಅನುದಾನ | | | | | |
| 1 | 2 | 3 | 4 | 5 | 6 | 7 | 8 | 9 | 10 |
| **ಲೆಕ್ಕ ಶೀರ್ಷಿಕೆ 4702–00–101–1–07–139** | | | | | | | | | |
| 1 | ಬೆಂಗಳೂರು ಗ್ರಾಮಾಂತರ ಜಿಲ್ಲೆ ದೊಡ್ಡ ಬಳ್ಳಾಪುರ ತಾಲ್ಲೂಕು ಹಣಬೆ ಕೆರೆಯಲ್ಲಿ ಹೂಳು ತೆಗೆಯುವುದು ಮತ್ತು ಅಭಿವೃದ್ಧಿ ಕಾಮಗಾರಿ | 40.00 | 40.00 | 12.00 | ಕಾವೇರಿ | ಪುನರು ಜ್ಜೀವನ ಕಾಮಗಾರಿ | 0.00 | 122.95 | ಕೆರೆ ಅಂಗಳದಲ್ಲಿ ಹಾಗೂ ನಾಲೆಗಳ ಹೂಳು ತೆಗೆಯುವುದು, ಗೈಡ ವಾಲ್ ನಿರ್ಮಾಣ ಇತ್ಯಾದಿ. |

| 1 | 2 | 3 | 4 | 5 | 6 | 7 | 8 | 9 | 10 |
|---|---|---|---|---|---|---|---|---|---|
| 2 | ಬೆಂಗಳೂರು ನಗರ ಜಿಲ್ಲೆ ಉತ್ತರ ತಾಲ್ಲೂಕು ಕೊಳತ್ತೂರು (ಅರಕೆರೆ) ಕೆರೆ ಹಾಗೂ ಕಾಲುವೆ ಅಭಿವೃದ್ಧಿ ಕಾಮಗಾರಿ | 50.00 | 50.00 | 15.00 | ಕಾವೇರಿ | ಪುನರು ಜ್ಜೀವನ ಕಾಮಗಾರಿ | 0.00 | 33.12 | ಏರಿಯ ಅಭಿವೃದ್ಧಿ, ಕೆರೆಯ ಅಂಗಳದಲ್ಲಿ ಹಾಗೂ ಫೀಡರ್ ನಾಲೆ ಹೂಳೆತ್ತುವುದು, ಕೋಡಿ ಅಭಿವೃದ್ಧಿ |
| 3 | ಬೆಂಗಳೂರು ನಗರ ಜಿಲ್ಲೆ ಉತ್ತರ ತಾಲ್ಲೂಕು ಸಿಂಗನಾಯಕನ ಹಳ್ಳಿ ಕೆರೆ ಹಾಗೂ ಕಾಲುವೆ ಅಭಿವೃದ್ಧಿ ಕಾಮಗಾರಿ | 50.00 | 50.00 | 15.00 | ದಕ್ಷಿಣ ಪಿನಾಕಿನಿ | ಸುಧಾರಣೆ ಕಾಮಗಾರಿ | 0.00 | 74.12 | ಏರಿಯ ಅಭಿವೃದ್ಧಿ, ಕೆರೆಯ ಅಂಗಳದಲ್ಲಿ ಹಾಗೂ ಫೀಡರ್ ನಾಲೆ ಹೂಳೆತ್ತುವುದು, ಕೋಡಿ ಅಭಿವೃದ್ಧಿ |
| 4 | ಬೆಂಗಳೂರು ನಗರ ಜಿಲ್ಲೆ ಉತ್ತರ ತಾಲ್ಲೂಕು ಕಾಕೋಳು (ಯತ್ತಿಕೆರೆ) ಕೆರೆ ಹಾಗೂ ಕಾಲುವೆ ಅಭಿವೃದ್ಧಿ ಕಾಮಗಾರಿ | 50.00 | 50.00 | 15.00 | ಕಾವೇರಿ | ಪುನರು ಜ್ಜೀವನ ಕಾಮಗಾರಿ | 0.00 | 13.28 | ಏರಿಯ ಅಭಿವೃದ್ಧಿ, ಕೆರೆಯ ಅಂಗಳದಲ್ಲಿ ಹಾಗೂ ಫೀಡರ್ ನಾಲೆ ಹೂಳೆತ್ತುವುದು, ಕೋಡಿ ಅಭಿವೃದ್ಧಿ |
| 5 | ಬೆಂಗಳೂರು ನಗರ ಜಿಲ್ಲೆ ಪೂರ್ವ ತಾಲ್ಲೂಕು ಬಿದರಹಳ್ಳಿ ಕೆರೆ ಹೂಳು ತೆಗೆದು ಕಾಲುವೆ ಅಭಿವೃದ್ಧಿ ಕಾಮಗಾರಿ | 35.00 | 35.00 | 10.50 | ದಕ್ಷಿಣ ಪಿನಾಕಿನಿ | ಪುನರು ಜ್ಜೀವನ ಕಾಮಗಾರಿ | 0.00 | 50.06 | ಏರಿಯ ಅಭಿವೃದ್ಧಿ, ಕೆರೆಯ ಅಂಗಳದಲ್ಲಿ ಹೂಳೆತ್ತುವುದು, ಫೀಡರ್ ನಾಲೆ ಅಭಿವೃದ್ಧಿ ಹಾಗೂ ಎಡದಂಡೆ ನಾಲೆ ಅಭಿವೃದ್ಧಿ |
| 6 | ಬೆಂಗಳೂರು ನಗರ ಜಿಲ್ಲೆ ಪೂರ್ವ ತಾಲ್ಲೂಕು | 45.00 | 45.00 | 13.50 | ದಕ್ಷಿಣ ಪಿನಾಕಿನಿ | ಪುನರು ಜ್ಜೀವನ ಕಾಮಗಾರಿ | 0.00 | 145.80 | ಏರಿ, ಕೋಡಿ ಮತ್ತು ನಾಲೆ ಅಭಿವೃದ್ಧಿ. |

| | | | | | | | | |
|---|---|---|---|---|---|---|---|---|
| | ರಾಂಪುರ ಕೆರೆ ಏರಿ ಕಾಲುವೆ ಮತ್ತು ಕೋಡಿ ದುರಸ್ಥಿ ಕಾಮಗಾರಿ | | | | | | | |
| 7 | ಬೆಂಗಳೂರು ನಗರ ಜಿಲ್ಲೆ ಪೂರ್ವ ತಾಲ್ಲೂಕು ಎಲೆ ಮಲ್ಲಪ್ಪಶೆಟ್ಟಿ ಕೆರೆ ಏರಿ ಕಾಲುವೆ ಅಭಿವೃದ್ಧಿ ಕಾಮಗಾರಿ | 45.00 | 45.00 | 13.50 | ದಕ್ಷಿಣ ಪಿನಾಕಿನಿ | ಪುನರು ಜ್ಜೀವನ ಕಾಮಗಾರಿ | 0.00 | 176.98 | ಏರಿ ಮತ್ತು ಕಾಲುವೆಗಳ ಅಭಿವೃದಿ ಮತ್ತು ಬೌಂಡರಿ ಟ್ರೆಂಚ್ ಮಾಡುವುದು. |
| 8 | ದಾವಣಗೆರೆ ಜಿಲ್ಲೆ ದಾವಣಗೆರೆ ತಾಲ್ಲೂಕು ಅಗಸನ ಕಟ್ಟೆ ಕೆರೆ ಆಧುನೀಕರಣ | 80.00 | 80.00 | 24.00 | ಕೃಷ್ಣಾ | ಪುನರು ಜ್ಜೀವನ ಕಾಮಗಾರಿ | | 138.00 | ಏರಿ ಮತ್ತು ಕಾಲುವೆ ಅಭಿವೃದ್ಧಿ,ಕೆರೆ ಅಂಗಳ ಹಾಗೂ ನಾಲೆಗಳ ಹೂಳೆತ್ತುವುದು. |
| 9 | ಶಿವಮೊಗ್ಗ ಜಿಲ್ಲೆ ತೀರ್ಥಹಳ್ಳಿ ತಾಲ್ಲೂಕು ಕವಲೆ ದುರ್ಗ ಕೆರೆ ಅಭಿವೃದ್ಧಿ | 40.00 | 40.00 | 12.00 | ಕೃಷ್ಣಾ | ಪುನರು ಜ್ಜೀವನ ಕಾಮಗಾರಿ | 0.00 | 36.42 | ಏರಿ, ನಾಲೆ ದುರಸ್ತಿ, ಕೆರೆ ಅಂಗಳದಲ್ಲಿ ಹೂಳೆತ್ತುವುದು, ಬೌಂಡರಿ ಟ್ರೆಂಚ್ ನಿರ್ಮಾಣ ಇತ್ಯಾದಿ |
| 10 | ಶಿವಮೊಗ್ಗ ಜಿಲ್ಲೆ ಶಿವಮೊಗ್ಗ ತಾಲ್ಲೂಕು ಬೂದಿಗೆರೆ ಹೊಸಕೆರೆ ಅಭಿವೃದ್ಧಿ | 45.00 | 45.00 | 13.50 | ಕೃಷ್ಣಾ | ಸುಧಾರಣೆ ಕಾಮಗಾರಿ | 0.00 | 222.00 | ಏರಿ ಅಭಿವೃದ್ಧಿ, ಹೊಸ ತೂಬುಗಳ ನಿರ್ಮಾಣ, ಕಾಲುವೆಗಳ ಲೈನಿಂಗ್ ಮತ್ತು ಅಡ್ಡಮೋರಿಗಳ ನಿರ್ಮಾಣ ಇತ್ಯಾದಿ |
| | | 480.00 | 480.00 | 144.00 | | | | |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.561

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ).

**ವಿಷಯ:** 2008-09ನೇ ಸಾಲಿನ ಸವಿವರ ಅಂದಾಜಿನಲ್ಲಿ ಲೆಕ್ಕ ಶೀರ್ಷಿಕೆ 4702 ಅಡಿ ಅನುಮೋದನೆಯಾಗಿರುವ ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರು ವ್ಯಾಪ್ತಿಯಲ್ಲಿ ಬರುವ ಕಾಮಗಾರಿಗಳ ಅಂದಾಜುಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:**
1. ದಿನಾಂಕ: 31.12.2008ರ ಬೆಂಗಳೂರು, ಸಣ್ಣ ನೀರಾವರಿ ದಕ್ಷಿಣ ವಲಯದ ಮುಖ್ಯ ಇಂಜಿನಿಯರ್‌ರವರ ಪತ್ರ ಸಂಖ್ಯೆ: ಮುಸದ/ತಾಂ.1/ಸ.ಇಂ.-1/4702ಸ.ಆ.ಅ./2008-09/4579
2. ದಿನಾಂಕ: 31.12.2008ರ ಬೆಂಗಳೂರು, ಸಣ್ಣ ನೀರಾವರಿ ದಕ್ಷಿಣ ವಲಯದ ಮುಖ್ಯ ಇಂಜಿನಿಯರ್‌ರವರ ಪತ್ರ ಸಂಖ್ಯೆ: ಮುಸದ/ತಾತ2/ಸ.ಇಂ.-5/4702ಸ.ಆ.ಅ./2008-09/4589
3. ದಿನಾಂಕ: 02.01.2009ರ ಬೆಂಗಳೂರು, ಸಣ್ಣ ನೀರಾವರಿ ದಕ್ಷಿಣ ವಲಯದ ಮುಖ್ಯ ಇಂಜಿನಿಯರ್‌ರವರ ಪತ್ರ ಸಂಖ್ಯೆ: ಮುಸದ/ತಾಂ.1/ಸ.ಇಂ.-2/4702ಸ.ಆ.ಅ./2008-09/35.
4. ದಿನಾಂಕ: 07.01.2009ರ ಬೆಂಗಳೂರು, ಸಣ್ಣ ನೀರಾವರಿ ದಕ್ಷಿಣ ವಲಯದ ಮುಖ್ಯ ಇಂಜಿನಿಯರ್‌ರವರ ಪತ್ರ ಸಂಖ್ಯೆ: ಮುಸದ/ತಾಂ.2/ಸ.ಇಂ.-5/4702ಸ.ಆ.ಅ./2008-09/90.

**ಪ್ರಸ್ತಾವನೆ:**

2008-09ನೇ ಸಾಲಿನ ಆಯವ್ಯಯದ "ಅಪೆಂಡಿಕ್ಸ್-ಇ" ನ ಲೆಕ್ಕ ಶೀರ್ಷಿಕೆ 4702-00-101-1-07-139-ಕೆರೆಗಳ ಆಧುನೀಕರಣ (ಪ್ರಧಾನ ಕಾಮಗಾರಿಗಳು) ಮತ್ತು ಲೆಕ್ಕ ಶೀರ್ಷಿಕೆ 4711-01-103-1-00-140- "ಪ್ರವಾಹ ನಿಯಂತ್ರಣ ಕಾಮಗಾರಿಗಳು" (ಪ್ರಧಾನ ಕಾಮಗಾರಿಗಳು) ಅಡಿ ಅಂದಾಜಿನ ಶೇ.30ರಷ್ಟು ಅನುದಾನದೊಂದಿಗೆ ಸೇರಿರುವ ಒಟ್ಟು 8 ಕಾಮಗಾರಿಗಳ (ಕಾಮಗಾರಿಗಳ ವಿವರಗಳನ್ನು ಅನುಬಂಧದಲ್ಲಿ ತಿಳಿಸಲಾಗಿದೆ) ಅಂದಾಜು ಪಟ್ಟಿಗಳಿಗೆ (ಒಟ್ಟು ಅಂದಾಜು ಮೊತ್ತ 380.00 ಲಕ್ಷ ರೂ.ಗಳು) ಆಡಳಿತಾತ್ಮಕ ಅನುಮೋದನೆ ನೀಡುವಂತೆ ಮೇಲೆ ಓದಲಾದ ಪತ್ರಗಳಲ್ಲಿ ಸಣ್ಣ ನೀರಾವರಿ ದಕ್ಷಿಣ ವಲಯದ ಮುಖ್ಯ ಇಂಜಿನಿಯರ್‌ರವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಆಡಳಿತಾತ್ಮಕ ಅನುಮೋದನೆಗೆ ಕೋರಿರುವ ಕಾಮಗಾರಿಗಳ ಅಂದಾಜು ಪಟ್ಟಿಗಳನ್ನು 2008-09ನೇ ಸಾಲಿಗೆ ಮುಂದುವರೆಸಿರುವ 2007-08ನೇ ಸಾಲಿನ ಸಣ್ಣ ನೀರಾವರಿ ಬೆಂಗಳೂರು/ಮೈಸೂರು ವೃತ್ತದ ದರಪಟ್ಟಿಯ ದರಗಳನ್ನು ಅಳವಡಿಸಿ ತಯಾರಿಸಲಾಗಿದೆ. ಈ ಎಲ್ಲಾ 8 ಕಾಮಗಾರಿಗಳು ಆರ್ಥಿಕವಾಗಿ ಹಾಗೂ ತಾಂತ್ರಿಕವಾಗಿ ಶಕ್ಯವಾಗಿದೆ.

ಪ್ರಸ್ತಾಪಿಸಿರುವ ಕಾಮಗಾರಿಗಳ ಅಂದಾಜು ಮೊತ್ತ, ಆಯವ್ಯಯದ ಲೆಕ್ಕ ಶೀರ್ಷಿಕೆ, ಅನುದಾನ, ಕಾಮಗಾರಿಯ ಸ್ವರೂಪ ಹಾಗೂ ಅಂದಾಜಿನಲ್ಲಿ ಅಳವಡಿಸಿರುವ ಕೆಲಸಗಳ ವಿವರ, ಸೃಷ್ಟಿಯಾಗಲಿರುವ ಹೊಸ ಅಚ್ಚುಕಟ್ಟು/ ಸ್ಥಿರೀಕರಿಸಲಾಗುತ್ತಿರುವ/ಪುನರ್ ಸ್ಥಾಪಿಸಲಾಗುತ್ತಿರುವ ಅಚ್ಚುಕಟ್ಟು ಹಾಗೂ ಲಾಭ ವೆಚ್ಚದ ಅನುಪಾತ ವಿವರಗಳನ್ನು ಅನುಬಂಧದಲ್ಲಿ ಕಾಮಗಾರಿವಾರು ನೀಡಲಾಗಿದೆ.

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 14 ಮಸಾವಿ 2009, (4) ಬೆಂಗಳೂರು, ದಿನಾಂಕ: 04 ನೇ ಫೆಬ್ರವರಿ 2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ವ್ಯಾಪ್ತಿಗೆ ಬರುವ ಈ ಆದೇಶದ ಅನುಬಂಧದಲ್ಲಿ ತಿಳಿಸಿರುವ ಒಟ್ಟು 380.00 ಲಕ್ಷ ರೂ.ಗಳ (ಮುನ್ನೂರ ಎಂಬತ್ತು ಲಕ್ಷ ರೂ.ಗಳು ಮಾತ್ರ) ಅಂದಾಜು ಮೊತ್ತದ 8 ಕಾಮಗಾರಿಗಳ ಅಂದಾಜು ಪಟ್ಟಿಗಳಿಗೆ ಕೆಳಕಂಡ ಷರತ್ತಿಗೊಳಪಟ್ಟು ಸರ್ಕಾರವು ಆಡಳಿತಾತ್ಮಕ ಅನುಮೋದನೆ ನೀಡಿದೆ.

1) ಕಾಮಗಾರಿಯ ವೆಚ್ಚವು ಯಾವುದೇ ಕಾರಣಕ್ಕೂ ಅನುಮೋದಿಸಿದ ಟೆಂಡರ್ ಮೊತ್ತಕ್ಕಿಂತ ಹೆಚ್ಚಾಗಬಾರದು ಹಾಗೂ ಕಾಮಗಾರಿಯನ್ನು ಕಾಲಮಿತಿಯೊಳಗೆ ಪೂರ್ಣಗೊಳಿಸತಕ್ಕದ್ದು.
2) ಒಂದು ವೇಳೆ ಸ್ಥಳ ಪರಿಸ್ಥಿತಿಗೆ ಅನುಗುಣವಾಗಿ ಹೆಚ್ಚಳ ನಿರೀಕ್ಷಿಸಿದಲ್ಲಿ ತಕ್ಷಣವೇ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದು ಕಾಮಗಾರಿಯನ್ನು ಪೂರ್ಣಗೊಳಿಸತಕ್ಕದ್ದು.
3) ಕಾಮಗಾರಿ ಪ್ರಾರಂಭಿಸುವ ಮುನ್ನ ವಿನ್ಯಾಸ ಬದಲಾವಣೆಯಿಂದಾಗಿ ಅಥವಾ ಬೇರೆ ಕಾರಣದಿಂದ ಅನುಮೋದಿಸಿದ ಅಂದಾಜು ಮೊತ್ತ ಹೆಚ್ಚಾಗುವ ಸಂಭವ ಇದ್ದಲ್ಲಿ, ತಕ್ಷಣ ಪರಿಷ್ಕೃತ ಅಂದಾಜಿಗೆ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದು ನಂತರ ಕಾಮಗಾರಿಯನ್ನು ಪ್ರಾರಂಭಿಸುವುದು.
4) ಕಾಮಗಾರಿಯ ಅಂದಾಜು ಪಟ್ಟಿಗಳನ್ನು ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿ/ತಾಂತ್ರಿಕ ಸಮಿತಿಯು ಸಭೆಯಲ್ಲಿ ಮಂಡಿಸಿ ತೀರುವಳಿಯನ್ನು ಪಡೆಯುವುದು.
5) ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999ರ ಅನುಸಾರ ಟೆಂಡರ್ ಕರೆದು ತೆಗೆದುಕೊಳ್ಳತಕ್ಕದ್ದು.

6) ಕಾಮಗಾರಿ ಪೂರ್ಣಗೊಂಡ ಕೂಡಲೇ ಪಿ.ಸಿ.ಆರ್ ವರದಿಯನ್ನು ಸಲ್ಲಿಸತಕ್ಕದ್ದು ಹಾಗೂ ಅವಶ್ಯಕತೆ ಇದ್ದಲ್ಲಿ ಪರಿಷ್ಕೃತ ಅಂದಾಜು ತಯಾರಿಸಿ ಟಿ.ಎ.ಸಿ. ಅನುಮೋದನೆ ಪಡೆದು ಸಂಬಂಧಿಸಿದ ಸಕ್ಷಮ ಅಧಿಕಾರಿಗಳಿಗೆ ಅನುಮೋದನೆಗಾಗಿ ಸಲ್ಲಿಸುವುದು.

7) ಕಾಮಗಾರಿಗೆ ಅಗತ್ಯವಿರುವ ಜಮೀನಿನ ಸ್ವಾಧೀನಕ್ಕಾಗಿ ನಿಯಮಾನುಸಾರ ತಕ್ಷಣ ಭೂಸ್ವಾಧೀನ ಪ್ರಕ್ರಿಯೆ ಪ್ರಾರಂಭಿಸಲು ಕ್ರಮ ಕೈಗೊಳ್ಳತಕ್ಕದ್ದು.

8) ಇ.ಐ.ಆರ್.ಎಲ್/ವರ್ಕ್‌ಸ್ಲಿಪ್‌ಗಳನ್ನು ಸಲ್ಲಿಸಬೇಕಾದಲ್ಲಿ ತಕ್ಷಣವೇ ಸಲ್ಲಿಸತಕ್ಕದ್ದು.

9) ತಾಂತ್ರಿಕ ಮಂಜೂರಾತಿಯನ್ನು ನೀಡುವ ಮೊದಲು ಅಂದಾಜನ್ನು ಮತ್ತೊಮ್ಮೆ ವಿವರವಾಗಿ ಪರಿಶೀಲಿಸುವುದು.

10) ನೀರ ಅಚ್ಚುಕಟ್ಟು ಹೊಂದಿರುವ ಯೋಜನೆಗಳಿಗೆ ನೀರು ಬಳಕೆದಾರರ ಸಂಘವನ್ನು ಸೃಜಿಸಬೇಕು ಹಾಗೂ ನಿರ್ವಹಣೆ ಯನ್ನು ಸದರಿ ಸಂಘಕ್ಕೆ ವಹಿಸತಕ್ಕದ್ದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ: 16/05/2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಲಾದ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ).

**ಅನುಬಂಧ**

**ಸರ್ಕಾರದ ಆದೇಶ ಸಂಖ್ಯೆ ಸನೀಇ 14 ಮಸಾವಿ (4) 2009 ದಿನಾಂಕ 04.02.2009**

**(ಮೊತ್ತ ಲಕ್ಷ ರೂ.ಗಳಲ್ಲಿ) ಹಾಗೂ (ವಿಸ್ತೀರ್ಣ ಹೆಕ್ಟೇರ್‌ಗಳಲ್ಲಿ)**

| ಕ್ರಮ ಸಂಖ್ಯೆ | ಕಾಮಗಾರಿ ಹೆಸರು | ಸ್ವೀಕೃತವಾಗಿರುವ ಅಂದಾಜು ಮೊತ್ತ | ಅನುಬಂಧ–ಇ ವಿವರ | | ನದಿ ಕೊಳ್ಳ | ಕಾಮಗಾರಿ ಸ್ವರೂಪ | ಹೊಸ ಅಚ್ಚುಕಟ್ಟು | ಪುನರ್ ಸ್ಥಾಪಿಸಲಾಗುವ/ ಸ್ಥಿರೀಕರಿಸುವ ಅಚ್ಚುಕಟ್ಟು | ಕಾಮಗಾರಿಯ ಸಂಕ್ಷಿಪ್ತ ವಿವರಗಳು |
|---|---|---|---|---|---|---|---|---|---|
| | | | ಅಂದಾಜು ಮೊತ್ತ | ಅನುದಾನ | | | | | |
| 1 | 2 | 3 | 4 | 5 | 6 | 7 | 8 | 9 | 10 |
| **ಲೆಕ್ಕ ಶೀರ್ಷಿಕೆ 4702–00–101–1–07–139 ಕೆರೆಗಳ ಆಧುನೀಕರಣ (ಪ್ರಧಾನ ಕಾಮಗಾರಿಗಳು)** | | | | | | | | | |
| 1 | ಮಂಡ್ಯ ಜಿಲ್ಲೆ ಮಳವಳ್ಳಿ ತಾಲ್ಲೂಕು ಭೀಮಾ ಜಲಾಶಯ ಅಭಿವೃದ್ಧಿ. | 45.00 | 45.00 | 13.50 | ಕಾವೇರಿ | ಪುನರುಜ್ಜೀವನ ಕಾಮಗಾರಿ | 0.00 | 433.00 | ಏರಿ ಮತ್ತು ಕಾಲುವೆ ಅಭಿವೃದ್ಧಿ ಇತ್ಯಾದಿ. |
| 2 | ಮಂಡ್ಯ ಜಿಲ್ಲೆ ಮದ್ದೂರು ತಾಲ್ಲೂಕು ನವಿಲೆ ಏತ ನೀರಾವರಿ ಯೋಜನೆ ಹತ್ತಿರ ಶಿಂಷಾ ನದಿ ಎಡ ದಂಡೆಗೆ ರಕ್ಷಣಾ ಕಾಮಗಾರಿ. | 45.00 | 45.00 | 13.50 | ಕಾವೇರಿ | ಪುನರುಜ್ಜೀವನ ಕಾಮಗಾರಿ | 0.00 | 349.23 | ರಕ್ಷಣಾ ಗೋಡೆ ನಿರ್ಮಾಣ |
| 3 | ಚಾಮರಾಜನಗರ ಜಿಲ್ಲೆ ಕೊಳ್ಳೆಗಾಲ ತಾಲ್ಲೂಕು ಕೋಟೆಕೆರೆ ಅಭಿವೃದ್ಧಿ ಕಾಮಗಾರಿ. | 45.00 | 45.00 | 13.50 | ಕಾವೇರಿ | ಪುನರುಜ್ಜೀವನ ಕಾಮಗಾರಿ | 0.00 | 108.00 | ಏರಿ, ಕೋಡಿ ಮತ್ತು ನಾಲೆ ಅಭಿವೃದ್ಧಿ ಇತ್ಯಾದಿ. |

| 1 | 2 | 3 | 4 | 5 | 6 | 7 | 8 | 9 | 10 |
|---|---|---|---|---|---|---|---|---|---|
| 4 | ಶಿವಮೊಗ್ಗ ಜಿಲ್ಲೆ ಸೊರಬ ತಾಲ್ಲೂಕು ಲಕ್ಕವಳ್ಳಿ ಗ್ರಾಮದ ದೊಡ್ಡಕೆರೆ ಅಭಿವೃದ್ಧಿ ಕಾಮಗಾರಿ. | 50.00 | 50.00 | 15.00 | ಕೃಷ್ಣಾ | ಪುನರು ಜ್ಜೀವನ ಕಾಮಗಾರಿ | 0.00 | | ಏರಿ, ತೂಬು, ನಾಲೆ ದುರಸ್ತಿ ಇತ್ಯಾದಿ |
| 5 | ತುಮಕೂರು ಜಿಲ್ಲೆ ತುಮಕೂರು ತಾಲ್ಲೂಕು ದೇವರಾಯ ಪಟ್ಟಣ ಕೆರೆ ಸಮಗ್ರ ಅಭಿವೃದ್ಧಿ ಕಾಮಗಾರಿ. | 50.00 | 50.00 | 15.00 | ಕಾವೇರಿ | ಪುನರು ಜ್ಜೀವನ ಕಾಮಗಾರಿ | 0.00 | 74.92 | ಏರಿ, ಕೋಡಿ ಹಳ್ಳ ನಾಲೆ ಅಭಿವೃದ್ಧಿ ಮತ್ತು ಕೆರೆಯ ಅಂಗಳ ಹೂಳೆತ್ತುವುದು ಇತ್ಯಾದಿ |
| 6 | ಮೈಸೂರು ಜಿಲ್ಲೆ ಹುಣಸೂರು ತಾಲ್ಲೂಕು ಶಿರಿಯೂರು ನಾಲೆ ಸರಪಳಿ 0.00 ರಿಂದ 3.00 ಕಿ. ಮೀ, 7.00 ಕಿ.ಮೀ ಯಿಂದ 9.00 ಕಿ.ಮೀ ವರೆಗೆ ಮತ್ತು 9.10 ಕಿ.ಮೀ ಯಿಂದ 12.00 ಕಿ. ಮೀ ವರೆಗೆ ನಾಲೆ ಮತ್ತು ಏರಿ ಅಭಿವೃದ್ಧಿ | 45.00 | 45.00 | 13.50 | ಕಾವೇರಿ | ಪುನರು ಜ್ಜೀವನ ಕಾಮಗಾರಿ | 0.00 | 263.00 | ನಾಲೆ ಅಭಿವೃದ್ಧಿ. |
| 7 | ಮೈಸೂರು ಜಿಲ್ಲೆ ಹೆಚ್ ಡಿ ಕೋಟೆ ತಾಲ್ಲೂಕು ಗೌಡನಕಟ್ಟೆ ಕೆರೆ ಏರಿ, ಬಲದಂಡೆ ಮತ್ತು ಎಡದಂಡೆ ನಾಲಾ ಅಭಿವೃದ್ಧಿ | 50.00 | 50.00 | 15.00 | ಕಾವೇರಿ | ಪುನರು ಜ್ಜೀವನ ಕಾಮಗಾರಿ | 0.00 | 140.00 | ಗೈಡ ವಾಲ್ ನಿರ್ಮಾಣ ಮತ್ತು ಗಾಡಿ ಸೇತುವೆ ನಿರ್ಮಾಣ ಮತ್ತು ನಾಲೆಗಳ ಅಭಿವೃದ್ಧಿ |
| | ಒಟ್ಟು | 330.00 | 330.00 | 99.00 | | | | | |
| | ಲೆಕ್ಕ ಶೀರ್ಷಿಕೆ 4711–01–103–1–00–140 –"ಪ್ರವಾಹ ನಿಯಂತ್ರಣ ಕಾಮಗಾರಿಗಳು" (ಪ್ರಧಾನ ಕಾಮಗಾರಿಗಳು) | | | | | | | | |
| 8 | ಶಿವಮೊಗ್ಗ ಜಿಲ್ಲೆ ತೀರ್ಥಹಳ್ಳಿ ತಾಲ್ಲೂಕು ನೊಣಬೂರು ಗ್ರಾಮ ಪಂಚಾಯ್ತಿ ಮತ್ತು ಅರಗ ಗ್ರಾಮ ಪಂಚಾಯ್ತಿ ಯಲ್ಲಿ ಹರಿಯುವ ಗೌರಿಹಳ್ಳ ದಂಡೆಗೆ ಪ್ರವಾಹ | 50.00 | 50.00 | 15.00 | ಕೃಷ್ಣಾ | ಹೊಸ ಕಾಮಗಾರಿ | | | ಪ್ರವಾಹದಿಂದ ಕೃಷಿ ಜಮೀನಿನ ರಕ್ಷಣೆಗಾಗಿ ತಡೆ ಏರಿ ನಿರ್ಮಾಣ. |

| | | | | | | | | | |
|---|---|---|---|---|---|---|---|---|---|
| | ತಡೆಗೋಡೆ (2 ರಿಂದ 4 ಕಿ.ಮೀ.) ಕಾಮಗಾರಿ | | | | | | | | |
| | ಒಟ್ಟು | 50.00 | 50.00 | 15.00 | | | | | |
| | ಒಟ್ಟು ಮೊತ್ತ | 380.00 | 380.00 | 114.00 | | | | | |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.563

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ).

**ವಿಷಯ:** 2008–09ನೇ ಸಾಲಿನ ಸವಿವರ ಅಂದಾಜಿನಲ್ಲಿ ಲೆಕ್ಕ ಶೀರ್ಷಿಕೆ 4702 ಅಡಿ ಅನುಮೋದನೆಯಾಗಿರುವ ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರು ವ್ಯಾಪ್ತಿಯಲ್ಲಿ ಬರುವ ಕಾಮಗಾರಿಗಳ ಅಂದಾಜುಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ

**ಓದಲಾಗಿದೆ:**
1. ದಿನಾಂಕ: 31.12.2008 ರ ಬೆಂಗಳೂರು, ಸಣ್ಣ ನೀರಾವರಿ ದಕ್ಷಿಣ ವಲಯದ ಮುಖ್ಯ ಇಂಜಿನಿಯರ್‌ರವರ ಪತ್ರ ಸಂಖ್ಯೆ: ಮುಸದ/ತಾತ–2/ಸ.ಇಂ.–5/4702ಸ.ಆ.ಅ./2008–09/4589.
2. ದಿನಾಂಕ: 07.01.2009ರ ಬೆಂಗಳೂರು, ಸಣ್ಣ ನೀರಾವರಿ ದಕ್ಷಿಣ ವಲಯದ ಮುಖ್ಯ ಇಂಜಿನಿಯರ್‌ರವರ ಪತ್ರ ಸಂಖ್ಯೆ: ಮುಸದ/ತಾಂ.2/ಸ.ಇಂ.–5/4702ಸ.ಆ.ಅ./2008–09/90

**ಪ್ರಸ್ತಾವನೆ:**

2008–09ನೇ ಸಾಲಿನ ಆಯವ್ಯಯದ "ಅಪೆಂಡಿಕ್ಸ್–ಇ" ನ ಲೆಕ್ಕ ಶೀರ್ಷಿಕೆ 4702–00–101–5–01–139–ಅಣೆಕಟ್ಟು ಮತ್ತು ಪಿಕಪ್‌ಗಳ ನಿರ್ಮಾಣ (ಪ್ರಧಾನ ಕಾಮಗಾರಿಗಳು) ಅಡಿ ಅಂದಾಜಿನ ಶೇ.30ರಷ್ಟು ಅನುದಾನದೊಂದಿಗೆ ಸೇರಿರುವ ಒಟ್ಟು 8 ಕಾಮಗಾರಿಗಳ (ಕಾಮಗಾರಿಗಳ ವಿವರಗಳನ್ನು ಅನುಬಂಧದಲ್ಲಿ ತಿಳಿಸಲಾಗಿದೆ) ಅಂದಾಜು ಪಟ್ಟಿಗಳಿಗೆ (ಒಟ್ಟು ಅಂದಾಜು ಮೊತ್ತ 490.00 ಲಕ್ಷ ರೂ.ಗಳು) ಆಡಳಿತಾತ್ಮಕ ಅನುಮೋದನೆ ನೀಡುವಂತೆ ಮೇಲೆ ಓದಲಾದ ಪತ್ರಗಳಲ್ಲಿ ಸಣ್ಣ ನೀರಾವರಿ ದಕ್ಷಿಣ ವಲಯದ ಮುಖ್ಯ ಇಂಜಿನಿಯರ್‌ರವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಆಡಳಿತಾತ್ಮಕ ಅನುಮೋದನೆಗೆ ಕೋರಿರುವ ಕಾಮಗಾರಿಗಳ ಅಂದಾಜು ಪಟ್ಟಿಗಳನ್ನು 2008–09ನೇ ಸಾಲಿಗೆ ಮುಂದುವರೆಸಿರುವ 2007–08ನೇ ಸಾಲಿನ ಸಣ್ಣ ನೀರಾವರಿ ಬೆಂಗಳೂರು/ಮೈಸೂರು ವೃತ್ತದ ದರಪಟ್ಟಿಯ ದರಗಳನ್ನು ಅಳವಡಿಸಿ ತಯಾರಿಸಲಾಗಿದೆ. ಈ ಎಲ್ಲಾ 8 ಕಾಮಗಾರಿಗಳು ಆರ್ಥಿಕವಾಗಿ ಹಾಗೂ ತಾಂತ್ರಿಕವಾಗಿ ಶಕ್ಯವಾಗಿದೆ.

ಪ್ರಸ್ತಾಪಿಸಿರುವ ಕಾಮಗಾರಿಗಳ ಅಂದಾಜು ಮೊತ್ತ, ಆಯವ್ಯಯದ ಲೆಕ್ಕ ಶೀರ್ಷಿಕೆ, ಅನುದಾನ, ಕಾಮಗಾರಿಯ ಸ್ವರೂಪ ಹಾಗೂ ಅಂದಾಜಿನಲ್ಲಿ ಅಳವಡಿಸಿರುವ ಕೆಲಸಗಳ ವಿವರ, ಸೃಷ್ಟಿಯಾಗಲಿರುವ ಹೊಸ ಅಚ್ಚುಕಟ್ಟು/ ಸ್ಥಿರೀಕರಿಸಲಾಗುತ್ತಿರುವ/ಪುನರ್ ಸ್ಥಾಪಿಸ ಲಾಗುತ್ತಿರುವ ಅಚ್ಚುಕಟ್ಟು ಹಾಗೂ ಲಾಭ ವೆಚ್ಚದ ಅನುಪಾತ ವಿವರಗಳನ್ನು ಅನುಬಂಧದಲ್ಲಿ ಕಾಮಗಾರಿವಾರು ನೀಡಲಾಗಿದೆ.

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 14 ಮಸಾವಿ 2009, (5) ಬೆಂಗಳೂರು, ದಿನಾಂಕ: 04ನೇ ಫೆಬ್ರವರಿ 2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ವ್ಯಾಪ್ತಿಗೆ ಬರುವ ಈ ಆದೇಶದ ಅನುಬಂಧದಲ್ಲಿ ತಿಳಿಸಿರುವ ಒಟ್ಟು 490.00 ಲಕ್ಷ ರೂ.ಗಳ (ನಾಲ್ಕು ನೂರ ತೊಂಬತ್ತು ಲಕ್ಷ ರೂ.ಗಳು ಮಾತ್ರ) ಅಂದಾಜು ಮೊತ್ತದ 8 ಕಾಮಗಾರಿಗಳ ಅಂದಾಜು ಪಟ್ಟಿಗಳಿಗೆ ಕೆಳಕಂಡ ಷರತ್ತಿಗೊಳಪಟ್ಟು ಸರ್ಕಾರವು ಆಡಳಿತಾತ್ಮಕ ಅನುಮೋದನೆ ನೀಡಿದೆ.

1) ಕಾಮಗಾರಿಯ ವೆಚ್ಚವು ಯಾವುದೇ ಕಾರಣಕ್ಕೂ ಅನುಮೋದಿಸಿದ ಟೆಂಡರ್ ಮೊತ್ತಕ್ಕಿಂತ ಹೆಚ್ಚಾಗಬಾರದು ಹಾಗೂ ಕಾಮಗಾರಿಯನ್ನು ಕಾಲಮಿತಿಯೊಳಗೆ ಪೂರ್ಣಗೊಳಿಸತಕ್ಕದ್ದು.
2) ಒಂದು ವೇಳೆ ಸ್ಥಳ ಪರಿಸ್ಥಿತಿಗೆ ಅನುಗುಣವಾಗಿ ಹೆಚ್ಚಳ ನಿರೀಕ್ಷಿಸಿದಲ್ಲಿ ತಕ್ಷಣವೇ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದು ಕಾಮಗಾರಿಯನ್ನು ಪೂರ್ಣಗೊಳಿಸತಕ್ಕದ್ದು.
3) ಕಾಮಗಾರಿ ಪ್ರಾರಂಭಿಸುವ ಮುನ್ನ ವಿನ್ಯಾಸ ಬದಲಾವಣೆಯಿಂದಾಗಿ ಅಥವಾ ಬೇರೆ ಕಾರಣದಿಂದ ಅನುಮೋದಿಸಿದ ಅಂದಾಜು ಮೊತ್ತ ಹೆಚ್ಚಾಗುವ ಸಂಭವ ಇದ್ದಲ್ಲಿ, ತಕ್ಷಣ ಪರಿಷ್ಕೃತ ಅಂದಾಜಿಗೆ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದು ನಂತರ ಕಾಮಗಾರಿಯನ್ನು ಪ್ರಾರಂಭಿಸುವುದು.

4) ಕಾಮಗಾರಿಯ ಅಂದಾಜು ಪಟ್ಟಿಗಳನ್ನು ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿ/ ತಾಂತ್ರಿಕ ಸಮಿತಿಯು ಸಭೆಯಲ್ಲಿ ಮಂಡಿಸಿ ತೀರುವಳಿಯನ್ನು ಪಡೆಯುವುದು.

5) ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999ರ ಅನುಸಾರ ಟೆಂಡರ್ ಕರೆದು ತೆಗೆದುಕೊಳ್ಳತಕ್ಕದ್ದು.

6) ಕಾಮಗಾರಿ ಪೂರ್ಣಗೊಂಡ ಕೂಡಲೇ ಪಿ.ಸಿ.ಆರ್ ವರದಿಯನ್ನು ಸಲ್ಲಿಸತಕ್ಕದ್ದು ಹಾಗೂ ಅವಶ್ಯಕತೆ ಇದ್ದಲ್ಲಿ ಪರಿಷ್ಕೃತ ಅಂದಾಜು ತಯಾರಿಸಿ ಟಿ.ಎ.ಸಿ. ಅನುಮೋದನೆ ಪಡೆದು ಸಂಬಂಧಿಸಿದ ಸಕ್ಷಮ ಅಧಿಕಾರಿಗಳಿಗೆ ಅನುಮೋದನೆಗಾಗಿ ಸಲ್ಲಿಸುವುದು.

7) ಕಾಮಗಾರಿಗೆ ಅಗತ್ಯವಿರುವ ಜಮೀನಿನ ಸ್ವಾಧೀನಕ್ಕಾಗಿ ನಿಯಮಾನುಸಾರ ತಕ್ಷಣ ಭೂಸ್ವಾಧೀನ ಪ್ರಕ್ರಿಯೆ ಪ್ರಾರಂಭಿಸಲು ಕ್ರಮ ಕೈಗೊಳ್ಳತಕ್ಕದ್ದು.

8) ಇ.ಐ.ಆರ್.ಎಲ್/ವರ್ಕ್‌ಸ್ಲಿಪ್‌ಗಳನ್ನು ಸಲ್ಲಿಸಬೇಕಾದಲ್ಲಿ ತಕ್ಷಣವೇ ಸಲ್ಲಿಸತಕ್ಕದ್ದು.

9) ತಾಂತ್ರಿಕ ಮಂಜೂರಾತಿಯನ್ನು ನೀಡುವ ಮೊದಲು ಅಂದಾಜನ್ನು ಮತ್ತೊಮ್ಮೆ ವಿವರವಾಗಿ ಪರಿಶೀಲಿಸುವುದು.

10) ನೀರ ಅಚ್ಚುಕಟ್ಟು ಹೊಂದಿರುವ ಯೋಜನೆಗಳಿಗೆ ನೀರು ಬಳಕೆದಾರರ ಸಂಘವನ್ನು ಸೃಜಿಸಬೇಕು ಹಾಗೂ ನಿರ್ವಹಣೆಯನ್ನು ಸದರಿ ಸಂಘಕ್ಕೆ ವಹಿಸತಕ್ಕದ್ದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ: 16/05/2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಲಾದ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ).

**ಅನುಬಂಧ**

**ಸರ್ಕಾರದ ಆದೇಶ ಸಂಖ್ಯೆ: ಸನೀಇ 14 ಮಸಾವಿ 2009, (5) ದಿನಾಂಕ: 04.02.2009**

**(ಮೊತ್ತ ಲಕ್ಷ ರೂ.ಗಳಲ್ಲಿ) ಹಾಗೂ (ವಿಸ್ತೀರ್ಣ ಹೆಕ್ಟೇರ್‌ಗಳಲ್ಲಿ)**

| ಕ್ರಮ ಸಂಖ್ಯೆ | ಕಾಮಗಾರಿ ಹೆಸರು | ಸ್ವೀಕೃತವಾಗಿರುವ ಅಂದಾಜು ಮೊತ್ತ | ಅನುಬಂಧ–ಇ | | ನದಿ ಕೊಳ್ಳ | ಕಾಮಗಾರಿ ಸ್ವರೂಪ | ಹೊಸ ಅಚ್ಚುಕಟ್ಟು | ಪುನರ್ ಸ್ಥಾಪಿಸಲಾಗುವ/ ಸ್ಥಿರೀಕರಿಸುವ ಅಚ್ಚುಕಟ್ಟು | ಕಾಮಗಾರಿಯ ಸಂಕ್ಷಿಪ್ತ ವಿವರಗಳು |
|---|---|---|---|---|---|---|---|---|---|
| | | | ಅಂದಾಜು ಮೊತ್ತ | ಅನುದಾನ | | | | | |
| 1 | 2 | 3 | 4 | 5 | 6 | 7 | 9 | 10 | 11 |
| **ಲೆಕ್ಕ ಶೀರ್ಷಿಕೆ 4702–00–101–5–01–139** | | | | | | | | | |
| 1 | ದಕ್ಷಿಣ ಕನ್ನಡ ಜಿಲ್ಲೆ ಮಂಗಳೂರು ತಾಲ್ಲೂಕು ಆದ್ಯಪಾಡಿ ಗ್ರಾಮದ ಹತ್ತಿರ ಉಪ್ಪು ನೀರು ತಡೆ ಅಣೆಕಟ್ಟು ನಿರ್ಮಾಣ | 150.00 | 150.00 | 45.00 | ಪಶ್ಚಿಮ ವಾಹಿನಿ | ಸುಧಾರಣೆ ಕಾಮಗಾರಿ | 0.00 | 0.00 | ಹಿನ್ನೀರಿನಿಂದ ಮುಳುಗಡೆಯಾಗುವ ನೀರಾವರಿ ಜಮೀನುಗಳ ರಕ್ಷಣೆ |

| | | | | | | | | | |
|---|---|---|---|---|---|---|---|---|---|
| 2 | ದಾವಣಗೆರೆ ಜಿಲ್ಲೆ ದಾವಣಗೆರೆ ತಾಲ್ಲೂಕು ದ್ಯಾಮವ್ವನ ಹಳ್ಳಿ ಗ್ರಾಮದ ಬಳಿ ಬಿದರ ಹಳ್ಳಕ್ಕೆ ಚೆಕ್ ಡ್ಯಾಂ ನಿರ್ಮಾಣ. | 50.00 | 50.00 | 15.00 | ಕೃಷ್ಣಾ | ಹೊಸ ಕಾಮಗಾರಿ | 0.00 | 0.00 | 1.50 ಮೀ ಎತ್ತರಕ್ಕೆ ಚೆಕ್ ಡ್ಯಾಂ ನಿರ್ಮಾಣ. |
| 3 | ದಾವಣಗೆರೆ ಜಿಲ್ಲೆ ಹರಿಹರ ತಾಲ್ಲೂಕು ಕೆಂಚನ ಹಳ್ಳಿ ಗ್ಹ್ರಾಮದ ಬಳಿ ಹಳ್ಳಕ್ಕೆ ಚೆಕ್ ಡ್ಯಾಂ ನಿರ್ಮಾಣ. | 40.00 | 40.00 | 12.00 | ಕೃಷ್ಣಾ | ಹೊಸ ಕಾಮಗಾರಿ | 0.00 | 0.00 | ಚೆಕ್ ಡ್ಯಾಂ ನಿರ್ಮಾಣ. |
| 4 | ದಾವಣಗೆರೆ ಜಿಲ್ಲೆ ದಾವಣಗೆರೆ ತಾಲ್ಲೂಕು ಹಿಂಡಸ ಗಟ್ಟ ಬಳಿ ಹಳ್ಳಕ್ಕೆ ಚೆಕ್ ಡ್ಯಾಂ ನಿರ್ಮಾಣ. | 40.00 | 40.00 | 12.00 | ಕೃಷ್ಣಾ | ಹೊಸ ಕಾಮಗಾರಿ | 0.00 | 0.00 | ಹೊಸ ಚೆಕ್ ಡ್ಯಾಂ. |
| 5 | ದಾವಣಗೆರೆ ಜಿಲ್ಲೆ ಜಗಳೂರು ತಾಲ್ಲೂಕು ಲಿಂಗದಹಳ್ಳಿ (ಸಿದ್ದಿಹಳ್ಳಿ) ಹತ್ತಿರ ಜಿನಗೀ ಹಳ್ಳಕ್ಕೆ ಅಡ್ಡಲಾಗಿ ಚೆಕ್ ಡ್ಯಾಂ ನಿರ್ಮಾಣ. | 40.00 | 40.00 | 12.00 | ಕೃಷ್ಣಾ | ಹೊಸ ಕಾಮಗಾರಿ | 0.00 | 0.00 | ಚೆಕ್ ಡ್ಯಾಂ ನಿರ್ಮಾಣ. |
| 6 | ಚಿತ್ರದುರ್ಗ ಜಿಲ್ಲೆ ಚಿತ್ರದುರ್ಗ ತಾಲ್ಲೂಕು ತುರುವನೂರು ಹೋಬಳಿ ಹುಣಸೆಕಟ್ಟೆ ಬಳಿ ಹಳ್ಳಕ್ಕೆ ಚೆಕ್ ಡ್ಯಾಂ ನಿರ್ಮಾಣ. | 35.00 | 35.00 | 10.50 | ಕೃಷ್ಣಾ | ಹೊಸ ಕಾಮಗಾರಿ | 0.00 | 0.00 | ಹೊಸ ಚೆಕ್ ಡ್ಯಾಂ. |
| 7 | ಚಿತ್ರದುರ್ಗ ಜಿಲ್ಲೆ ಚಳ್ಳಕೆರೆ ತಾಲ್ಲೂಕು (ಅನುಮೋದಿತ ಅನುಭಂದ–ಇ ನಲ್ಲಿ ಚಿತ್ರದುರ್ಗ ತಾಲ್ಲೂಕು ಎಂದು | 100.00 | 100.00 | 30.00 | ಕೃಷ್ಣಾ | ಹೊಸ ಕಾಮಗಾರಿ | 0.00 | 0.00 | ಹೊಸ ಚೆಕ್ ಡ್ಯಾಂ. |

| | | | | | | | | | |
|---|---|---|---|---|---|---|---|---|---|
| | ತಿಳಿಸಿದೆ) ರಾಣಿಕೆರೆ ಕೋಡಿಹಳ್ಳಕ್ಕೆ ವಿಶ್ವೇಶ್ವರ ಪುರ ಬಳಿ ಬ್ಯಾರೇಜ್ ನಿರ್ಮಾಣ. | | | | | | | | |
| 8 | ಚಿತ್ರದುರ್ಗ ಜಿಲ್ಲೆ ಚಿತ್ರದುರ್ಗ ತಾಲ್ಲೂಕು ದೊಡ್ಡ ಚೆಲ್ಲೂರು ಹತ್ತಿರ ಹಳ್ಳಕ್ಕೆ ಚೆಕ್ ಡ್ಯಾಂ ನಿರ್ಮಾಣ. | 35.00 | 35.00 | 10.50 | ಕೃಷ್ಣಾ | ಹೊಸ ಕಾಮಗಾರಿ | 0.00 | 0.00 | 45 ಮೀ. ಉದ್ದದ ಕಾಂಕ್ರೀಟ್ ಬಾಡಿ ವಾಲ್ ಮತ್ತು ಎರಡು ಪಾರ್ಶ್ವ ಗಳಲ್ಲಿಯೂ ಮಣ್ಣಿನ ಏರಿ ನಿರ್ಮಾಣ. |
| | **ಒಟ್ಟು** | **490.00** | **490.00** | **147.00** | | | | | |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಅರ್.564

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ).

**ವಿಷಯ:** ಕೊಪ್ಪಳ ಜಿಲ್ಲೆ ಹಾಗೂ ತಾಲ್ಲೂಕಿನ ಲಾಚನಕೇರಿ ಗ್ರಾಮದ ಹತ್ತಿರ ಏತ ನೀರಾವರಿ ಯೋಜನೆ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ:**
1. ದಿನಾಂಕ 23/12/08ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರ ಪತ್ರ ಸಂಖ್ಯೆ:ಮುಇಂ/ಸನೀ(ಉ)ವ/ಬಿಜೆಪಿ/ತಾಂಸ-3/ಸಇಂ-7/2008-09/6785.
2. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ದಿನಾಂಕ 21/01/2009ರ ಪತ್ರ ಸಂಖ್ಯೆ: ಮುಸದ/ಆಪ್ತಶಾಖೆ/ಟೆಂಡರ್/08-09/191.

**ಪ್ರಸ್ತಾವನೆ:**

ಕೊಪ್ಪಳ ಜಿಲ್ಲೆ ಹಾಗೂ ತಾಲ್ಲೂಕಿನ ಲಾಚನಕೇರಿ ಗ್ರಾಮದ ಹತ್ತಿರ ಏತ ನೀರಾವರಿ ಯೋಜನೆ ಕಾಮಗಾರಿಯ 29.20 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರು ಆದೇಶ ಸಂಖ್ಯೆ:234/2007-08, ದಿನಾಂಕ 31/03/2008ರಲ್ಲಿ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಕುಷ್ಟಗಿ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| 1 | ಕರ್ನಾಟಕ ರಾಜ್ಯ ಪತ್ರ | ದಿ:02/10/2008 |
| 2 | ಕೊಪ್ಪಳ ಜಿಲ್ಲಾ ಟೆಂಡರ್ ಬುಲೆಟಿನ್ | ದಿ:18/10/2008 |
| 3 | ಸಂಯುಕ್ತ ಕರ್ನಾಟಕ ದಿನಪತ್ರಿಕೆ | ದಿ:22/10/2008 |

ಈ ಟೆಂಡರ್ ಕರೆಗೆ ಪ್ರತಿಕ್ರಯಿಸಿ ಖಾಲಿ ಟೆಂಡರ್ ಫಾರಂ ಪಡೆದ ಇಬ್ಬರು ಗುತ್ತಿಗೆದಾರರು ನಿಗದಿತ ದಿನದಂದು ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸಿರುತ್ತಾರೆ. ಸ್ವೀಕರಿಸಲಾದ ಟೆಂಡರ್‌ಗಳನ್ನು ದಿನಾಂಕ 13/11/2008ರಂದು ತೆರೆಯಲಾಗಿದೆ. ಟೆಂಡರ್‌ನಲ್ಲಿ ನಮೂದಿಸಿರುವ ದರಗಳ ತುಲನಾತ್ಮಕ ವಿವರ ಕೆಳಕಂಡಂತಿದೆ:

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | ರೂ.29,09,429/- |
| ಪಿ.ಎಸ್.ಸಿ. ಪೈಪುಗಳಿಗೆ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಟೆಂಡರಿಗೆ ಇಡಲಾದ ಮೊತ್ತ | ರೂ.48,36,537/- |

| ಕ್ರ. ಸಂ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ | ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ |
|---|---|---|---|---|
| 1 | ಟಿ.ರಾಮಕೃಷ್ಣ, 1ನೇ ದರ್ಜೆ ಗುತ್ತಿಗೆದಾರರು, ಗಂಗಾವತಿ | ರೂ.79,36,511/– | 172.78 ಹೆಚ್ಚು | 64.09 ಹೆಚ್ಚು |
| 2 | ಬಸೀರ ಅಹ್ಮದ್, 1ನೇ ದರ್ಜೆ ಗುತ್ತಿಗೆದಾರರು, ನಾರಾಯಣಪುರ | ರೂ.91,05,540/– | 212.96 ಹೆಚ್ಚು | 88.26 ಹೆಚ್ಚು |

ಮೇಲ್ಕಂಡಂತೆ ಕ್ರ.ಸಂ: 1ರಲ್ಲಿರುವ ಶ್ರೀ ಟಿ. ರಾಮಕೃಷ್ಣ, 1ನೇ ದರ್ಜೆ ಗುತ್ತಿಗೆದಾರರು, ಗಂಗಾವತಿ ಇವರು ನಮೂದಿಸಿರುವ ಮೊತ್ತ ರೂ.79,36,511–00ಗಳು ಅತಿ ಕಡಿಮೆ ಮೊತ್ತವಾಗಿದ್ದು, ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 172.78ರಷ್ಟು ಹೆಚ್ಚಾಗಿದ್ದು, ಈ ಮೊತ್ತಕ್ಕೆ ಸದರಿಯವರ ಟೆಂಡರ್‌ನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್‌ರವರು ಮೇಲೆ (1)ರಲ್ಲಿ ಓದಲಾದ ದಿನಾಂಕ 23/12/08ರ ಪತ್ರದಲ್ಲಿ ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 03/01/2009ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರನ್ನು ಅವರು ಸೂಚಿಸಿರುವ ದರಗಳು ಪ್ರಸಕ್ತ ದರ ಪಟ್ಟಿಗೆ ಹೋಲಿಸಿದಾಗ ಶೇ.64.09ರಷ್ಟು ಹೆಚ್ಚಾಗಿರುವುದರಿಂದ, ಈ ದರಗಳನ್ನು ಕಡಿಮೆ ಮಾಡುವಂತೆ ತಿಳಿಸಲಾಯಿತು. ಇದಕ್ಕೆ ಗುತ್ತಿಗೆದಾರರು ಪ್ರತಿಕ್ರಯಿಸುತ್ತಾ, ಪ್ರಸ್ತುತ ಸಿಮೆಂಟ್, ಪಿ.ಎಸ್.ಸಿ. ಪೈಪುಗಳು ಪ್ರಸಕ್ತ ಮಾರುಕಟ್ಟೆ ದರಗಳು ಹಾಗೂ ಕೂಲಿ ದರಗಳು ಟೆಂಡರ್‌ನಲ್ಲಿ ಪರಿಗಣಿಸಿದ ದರಗಳಿಗಿಂತ ಹೆಚ್ಚಾಗಿರುವುದರಿಂದ, ತಾವು ನಮೂದಿಸಿರುವ ದರಗಳು ಸಮಂಜಸವಾಗಿರುವುದಾಗಿ ತಿಳಿಸಿದರು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ.48,36,537–00ಗಳ ಮೇಲೆ ಶೇಕಡ 14.50ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.55,37,835–00ಗಳಿಗೆ ಕಾಮಗಾರಿಯನ್ನು ಶ್ರೀ ಟಿ. ರಾಮಕೃಷ್ಣ, 1ನೇ ದರ್ಜೆ ಗುತ್ತಿಗೆದಾರರು, ಗಂಗಾವತಿ ಇವರಿಗೆ ವಹಿಸಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುತ್ತಾರೆಂದು ತಿಳಿಸಿ ಟೆಂಡರ್ ಪರಿಶೀಲನಾ ಸಭೆಯ ನಡವಳಿಗಳೊಂದಿಗೆ ಸಮಿತಿಯ ಅಧ್ಯಕ್ಷರೂ ಆದ ಸಣ್ಣ ನೀರಾವರಿ ದಕ್ಷಿಣ ವಲಯದ ಮುಖ್ಯ ಇಂಜಿನಿಯರ್‌ರವರು ಸದರಿ ಟೆಂಡರ್‌ನ್ನು ಅಂಗೀಕರಿಸಲು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರದ ಅನುಮೋದನೆಗೆ ಶಿಫಾರಸ್ಸು ಮಾಡಿರುತ್ತಾರೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 73 ಏನೀಯೋ 2008, ಬೆಂಗಳೂರು, ದಿನಾಂಕ 25ನೇ ಫೆಬ್ರವರಿ 2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕೊಪ್ಪಳ ಜಿಲ್ಲೆ ಹಾಗೂ ತಾಲ್ಲೂಕಿನ ಲಾಚನಕೇರಿ ಗ್ರಾಮದ ಹತ್ತಿರ ಏತ ನೀರಾವರಿ ಯೋಜನೆ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿ ಹಾಗೂ ಪ್ರಸಕ್ತ ಸಾಲಿನ ದರಪಟ್ಟಿಯಂತೆ ಪರಿಷ್ಕರಿಸಿದ ಟೆಂಡರಿಗೆ ಇಡಲಾದ ಮೊತ್ತ ರೂ.48,36,537–00ಗಳ ಮೇಲೆ ಶೇಕಡ 14.50ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.55,37,835–00ಗಳಿಗೆ (ಐವತ್ತೈದು ಲಕ್ಷದ ಮೂವತ್ತೇಳು ಸಾವಿರದ ಎಂಟು ನೂರ ಮೂವತ್ತೈದು ರೂ.ಗಳು ಮಾತ್ರ) ಶ್ರೀ ಟಿ. ರಾಮಕೃಷ್ಣ, 1ನೇ ದರ್ಜೆ ಗುತ್ತಿಗೆದಾರರು, ಗಂಗಾವತಿ ಇವರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.749

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ಇಂಧನ ಸಚಿವಾಲಯ**

**ವಿಷಯ:** ಮೆ:: ಆರ್.ಬಿ. ಸೇಟ್ ಶ್ರೀರಾಮ ನರಸಿಂಗ್‌ದಾಸ್, ಬಳ್ಳಾರಿ ಕಂಪನಿಗೆ 3.2 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ವರ್ಗಾವಣೆ ಮಾಡುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 398 ಎನ್‌ಸಿಇ 2005 ದಿನಾಂಕ: 20.4.2006.
2) ಸರ್ಕಾರಿ ಆದೇಶ ಸಂಖ್ಯೆ: ಇಎನ್ 209 ಎನ್‌ಸಿಇ 2006 ದಿನಾಂಕ: 26.5.2006.
3) ಸರ್ಕಾರಿ ಆದೇಶ ಸಂಖ್ಯೆ: ಇಎನ್ 146 ಎನ್‌ಸಿಇ 2007 ದಿನಾಂಕ: 17.5.2007.
4) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿಎಲ್/08/ ಆರ್‌ಬಿಎಸ್‌ಎಸ್‌ಎನ್–ಇಐಎಲ್/ 2008/ 1568 ದಿನಾಂಕ: 23/26.9.2008.
5) ಮುಖ್ಯ ವಿದ್ಯುತ್ ಪರಿವೀಕ್ಷಕರ ಪತ್ರ ಸಂಖ್ಯೆ: ಮುವಿಪ/ಉಮುವಿಪ/ವಿಪ(ತಾ)/ಕ–ಪವನ/30707/ 08–09 ದಿನಾಂಕ: 2.12.2008.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ:: ಎನರ್ಕಾನ್ ಇಂಡಿಯಾ ಲಿಮಿಟೆಡ್ ಕಂಪನಿಗೆ ಬೆಳಗಾಂ ಮತ್ತು ಗದಗ ಜಿಲ್ಲೆಗಳಲ್ಲಿ ಒಟ್ಟು 236.81 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆನ್ನು ಹಂಚಿಕೆ ಮಾಡಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಸದರಿಯವರಿಗೆ ಹಂಚಿಕೆಯಾಗಿದ್ದ ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 261.61 ಮೆಗಾ ವ್ಯಾಟ್‌ಗೆ ಹೆಚ್ಚಿಸಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಸದರಿಯವರಿಗೆ ಹಂಚಿಕೆಯಾಗಿದ್ದ 261.61 ಮೆಗಾ ವ್ಯಾಟ್ ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 457.61 ಮೆಗಾ ವ್ಯಾಟ್‌ಗೆ ಹೆಚ್ಚಿಸಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (4) ರಲ್ಲಿ ಓದಲಾದ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತರವರು ಮೆ:: ಎನರ್ಕಾನ್ ಇಂಡಿಯಾ ಲಿಮಿಟೆಡ್ ಕಂಪನಿಗೆ ಹಂಚಿಕೆಯಾಗಿರುವ 457.61 ಮೆಗಾ ವ್ಯಾಟ್ ಸಾಮರ್ಥ್ಯದಲ್ಲಿ ಅಂಶಿಕ ಸಾಮರ್ಥ್ಯ 182.4 ಮೆಗಾ ವ್ಯಾಟ್ ಸಾಮರ್ಥ್ಯದಲ್ಲಿ 3.2 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೆ:: ಆರ್.ಬಿ. ಸೇಟ್ ಶ್ರೀರಾಮ ನರಸಿಂಗ್‌ದಾಸ್, ಬಳ್ಳಾರಿ ಕಂಪನಿಗೆ ಗದಗ ಜಿಲ್ಲೆಯ ಹರ್ತಿ, ನಾಗವಿ, ಬೆಳದಡಿ ಗ್ರಾಮಗಳಲ್ಲಿ ಅನುಷ್ಠಾನ ಮಾಡಲು ವರ್ಗಾವಣೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಈ ಪ್ರಸ್ತಾವನೆ ಬಗ್ಗೆ ಪರಿಶೀಲಿಸಿ ಅಭಿಪ್ರಾಯ ನೀಡುವಂತೆ ಮುಖ್ಯ ವಿದ್ಯುತ್ ಪರಿವೀಕ್ಷಕರನ್ನು ಕೋರಲಾಗಿತ್ತು. ಅದರಂತೆ ಮೇಲೆ ಕ್ರಮ ಸಂಖ್ಯೆ (5) ರಲ್ಲಿ ಓದಲಾದ ಪತ್ರದಲ್ಲಿ ಮುಖ್ಯ ವಿದ್ಯುತ್ ಪರಿವೀಕ್ಷಕರು ಧಾರವಾಡ ಜಿಲ್ಲೆಯ ವಿದ್ಯುತ್ ಪರಿವೀಕ್ಷಕರು ದಿನಾಂಕ: 28.11.2008 ರಂದು ಯೋಜನಾ ಸ್ಥಳವನ್ನು ಪರಿವೀಕ್ಷಿಸಿ ಮೆ:: ಎನರ್ಕಾನ್ ಇಂಡಿಯಾ ಲಿಮಿಟೆಡ್ ಕಂಪನಿಯವರು ವಿದ್ಯುತ್ ಕಾಮಗಾರಿಯನ್ನು ಮಾಡುತ್ತಿರುವರೆಂದು, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಇವರಿಂದ ಎವಾಕ್ಯುಯೇಷನ್‌ಗೆ ಅನುಮತಿ ಪಡೆದಿರುವರೆಂದು, ರಸ್ತೆ (ಸಿವಿಲ್) ಕಾಮಗಾರಿ ಕೆಲಸ ಮತ್ತು ವಿಂಡ್ ಮಿಲ್ ಟವರ್ ಫೌಂಡೇಶನ್ ಕೆಲಸ ಪೂರ್ಣವಾಗಿದೆಯೆಂದು, ವಿಂಡ್ ಮಿಲ್ ಟವರ್ ಕಾಮಗಾರಿ ಕೆಲಸ ಪ್ರಗತಿಯಲ್ಲಿದೆಯೆಂದು, ಪವನ ಜನಕ, ವಿದ್ಯುತ್ ಪರಿವರ್ತಕ ಮತ್ತು 33 ಕೆ.ವಿ. ವಿದ್ಯುತ್ ಮಾರ್ಗದ ಕೆಲಸ, ಕಾಮನ್ ಮೀಟರಿಂಗ್ ಸ್ಟೇಶನ್ ಅಳವಡಿಸುವ ಕೆಲಸ ಬಾಕಿ ಉಳಿದೆಯೆಂದು ತಿಳಿಸಿರುತ್ತಾರೆಂದು ವರದಿ ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕುಲಂಕುಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 303 ಎನ್‌ಸಿಇ 2008, ಬೆಂಗಳೂರು, ದಿನಾಂಕ: 19ನೇ ಡಿಸೆಂಬರ್ 2008.**

ಮೆ:: ಎನರ್ಕಾನ್ ಇಂಡಿಯಾ ಲಿಮಿಟೆಡ್ ಕಂಪನಿಗೆ ಹಂಚಿಕೆಯಾಗಿರುವ 457.61 ಮೆಗಾ ವ್ಯಾಟ್ ಸಾಮರ್ಥ್ಯದಲ್ಲಿ ಅಂಶಿಕ ಸಾಮರ್ಥ್ಯ 182.4 ಮೆಗಾ ವ್ಯಾಟ್ ಸಾಮರ್ಥ್ಯದಲ್ಲಿ 3.2 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್

ಯೋಜನೆಯನ್ನು ಮೆ:: ಆರ್.ಬಿ. ಸೇಟ್ ಶ್ರೀರಾಮ ನರಸಿಂಗ್‌ದಾಸ್, ಬಳ್ಳಾರಿ ಕಂಪನಿಗೆ ಗದಗ ಜಿಲ್ಲೆಯ ಹರ್ತಿ, ನಾಗವಿ, ಬೆಳದಡಿ ಗ್ರಾಮಗಳಲ್ಲಿ ಅನುಷ್ಠಾನ ಮಾಡಲು ವರ್ಗಾವಣೆ ಮಾಡಲಾಗಿದೆ. ವಿವರಗಳು ಕೆಳಗಿನಂತಿದೆ:

Identified potential place is a plain area situated at about 6 Km on the South-West of Gadag Town and it comprises agriculture area. It has gentle elevation of about 650 to 763 mtrs. The entire area is covered in the following Geographical co-ordinates :-

**Latitude**: 15°15’43”- 15°25’0” N

**Longitude**: 75°31’15”- 75°36’57” E

**Ridge peaks:** 672, 659, 687, 679, 674, 709, 703, 758, 764, 763, 750m AMSL.

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಹಂಚಿಕೆ ಆದೇಶದ ಇತರೆ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 122

**ಎಸ್.ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ

**ವಿಷಯ:** ಮೆ:: ಮಹದೇಶ್ವರ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ:** 1 ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : ಕೆಆರ್‌ಇಡಿ/06/ಗಾಂಧಿನಗರ/09/857 ದಿನಾಂಕ: 13.2.2009.

2 ದಿನಾಂಕ: 13.2.2009 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ:: ಮಹದೇಶ್ವರ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಚಾಮರಾಜನಗರ ಜಿಲ್ಲೆಯ ಕೊಳ್ಳೆಗಾಲ ತಾಲ್ಲೂಕಿನ ಗಾಂಧಿನಗರ/ತೆಲ್ಲನೂರ್ ಗ್ರಾಮದ ಬಳಿ ಕಾವೇರಿ ನದಿಗೆ ಅಡ್ಡಲಾಗಿ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಹಂಚಿಕೆ ಸಮಿತಿ ಸಭೆಯ ನಡವಳಿಯ ಪುಟ ಸಂಖ್ಯೆ: 20ರ ಕ್ರಮ ಸಂಖ್ಯೆ: 85 ರಲ್ಲಿ ಹಂಚಿಕೆ ಸಮಿತಿಯು ಶಿಫಾರಸ್ಸು ಮಾಡಿರುವ ಹಿನ್ನೆಲೆಯಲ್ಲಿ, ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ:

**ಸರ್ಕಾರದ ಆದೇಶ ಸಂಖ್ಯೆ: ಇಎನ್ 62 ಎನ್‌ಸಿಇ 2009, ಬೆಂಗಳೂರು, ದಿನಾಂಕ: 17ನೇ ಫೆಬ್ರವರಿ 2009.**

ಮೆ:: ಮಹದೇಶ್ವರ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಚಾಮರಾಜನಗರ ಜಿಲ್ಲೆಯ ಕೊಳ್ಳೆಗಾಲ ತಾಲ್ಲೂಕಿನ ಗಾಂಧಿನಗರ/ತೆಲ್ಲನೂರ್ ಗ್ರಾಮದ ಬಳಿ ಕಾವೇರಿ ನದಿಗೆ ಅಡ್ಡಲಾಗಿ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು (Weir-**Latitude**: 12°18’8” N & **Longitude**: 77°19’49”E and Power House- **Latitude**: 12°16’54” N & **Longitude**: 77°21’15”E) ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ:

1(ಅ) ಸದರಿ ಯೋಜನೆಯಿಂದ ಕೆಳ ತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.

(ಆ) ಹಂಚಿಕೆದಾರರು ಈ ಆದೇಶ ಹೊರಡಿಸಿದ ಮೂರು ತಿಂಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಇ) ಅಂತಹ ಒಡಂಬಡಿಕೆಯನ್ನು ರೂ. 400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(ಈ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್) ಪರಿಷ್ಕರಿಸಲು ಮೆಗಾವಾಟ್ ಒಂದಕ್ಕೆ ರೂ. 25,000.00 ದಂತೆ ರೂ. 1.00 ಲಕ್ಷಕ್ಕೆ ಕಡಿಮೆ ಇಲ್ಲದಂತೆ ಪಾವತಿಸತಕ್ಕದ್ದು.

2(ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಅರಣ್ಯ, ಜೀವಿಶಾಸ್ತ್ರ & ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3 ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಷಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

4 ಫೈನಾನ್ಷಿಯಲ್ ಕ್ಲೋಷರ್‌ನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5 ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6 ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7 ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ / ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

8. ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರು ಸರ್ಕಾರಿ ಜಲ ವಿದ್ಯುತ್ / ನೀರಾವರಿ/ ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದ್ದಲ್ಲಿ ಯಾವುದೇ ಪರಿಹಾರವನ್ನು ಅಭಿವೃದ್ಧಿದಾರರು ನಿರೀಕ್ಷಿಸುವಂತಿಲ್ಲ.

9. ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.

10 ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಯಾವುದೇ ಯೋಜನೆಗಳಿಂದಾಗಿ ಸದರಿ ಯೋಜನೆಯು ಮುಳುಗಡೆಯಾದಲ್ಲಿ, ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಪೂರ್ಣ ಜವಾಬ್ದಾರರಾಗಿರುತ್ತಾರೆ.

11 ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.654

**ಎಸ್.ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ

**ವಿಷಯ:** ಮೆ:: ಪ್ರಸನ್ನ ಪವರ್ ಲಿಮಿಟೆಡ್ ಕಂಪನಿಗೆ ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲ್ಲೂಕಿನ ಅಣಿಯೂರು ಗ್ರಾಮದ ಬಳಿ ಹಂಚಿಕೆಯಾಗಿರುವ 6.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನಗೊಳಿಸಲು ಕಾಲಾವಕಾಶವನ್ನು ವಿಸ್ತರಿಸುವ ಬಗ್ಗೆ.

ಓದಲಾಗಿದೆ:
1) ಸರ್ಕಾರಿ ಆದೇಶ ಸಂಖ್ಯೆ: ಡಿಇ 42 ಎನ್‌ಸಿಇ 1998 ದಿನಾಂಕ: 11.11.1998.
2) ಸರ್ಕಾರಿ ಆದೇಶ ಸಂಖ್ಯೆ: ಇಂಇ 105 ಎನ್‌ಸಿಇ 2002 ದಿನಾಂಕ: 28.5.2002.
3) ಸರ್ಕಾರಿ ಆದೇಶ ಸಂಖ್ಯೆ: ಇಂಇ 266 ಎನ್‌ಸಿಇ 2003 ದಿನಾಂಕ: 12.12.2004.
4) ಸರ್ಕಾರಿ ಆದೇಶ ಸಂಖ್ಯೆ: ಇಂಇ 143 ಎನ್‌ಸಿಇ 2005 ದಿನಾಂಕ: 13.6.2005.
5) ಸರ್ಕಾರಿ ಆದೇಶ ಸಂಖ್ಯೆ: ಇಎನ್ 469 ಎನ್‌ಸಿಇ 2006 ದಿನಾಂಕ: 27.2.2007.
6) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿಎಲ್/06/2008/2261 ದಿನಾಂಕ: 18/31.12.2008.

ಪ್ರಸ್ತಾವನೆ:

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಆದೇಶದಲ್ಲಿ ಮೆ:: ಪ್ರಸನ್ನ ಪವರ್ ಲಿಮಿಟೆಡ್ ಕಂಪನಿಯವರಿಗೆ ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲ್ಲೂಕಿನ ಅಣಿಯೂರು ಗ್ರಾಮದ ಬಳಿ 3.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಆದೇಶದಲ್ಲಿ ಸದರಿ ಯೋಜನೆಯ ಸಾಮರ್ಥ್ಯವನ್ನು 3.00 ಮೆಗಾ ವ್ಯಾಟ್ ನಿಂದ 4.5 ಮೆಗಾ ವ್ಯಾಟ್‌ಗೆ ಹೆಚ್ಚಿಸಿ ಯೋಜನೆಯ ಅನುಷ್ಠಾನಕ್ಕೆ 2 ವರ್ಷಗಳ ಕಾಲಾವಕಾಶವನ್ನು ವಿಸ್ತರಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಆದೇಶದಲ್ಲಿ ಸದರಿ ಯೋಜನೆಯ ಸಾಮರ್ಥ್ಯವನ್ನು 4.5 ಮೆಗಾ ವ್ಯಾಟ್‌ನಿಂದ 6.00 ಮೆಗಾ ವ್ಯಾಟ್‌ಗೆ ಹೆಚ್ಚಿಸಿ ಯೋಜನೆಯನ್ನು ಅನುಷ್ಠಾನ ಮಾಡಲು ಕಾಲಾವಕಾಶವನ್ನು ದಿನಾಂಕ: 28.5.2005 ರವರೆಗೆ ವಿಸ್ತರಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (4)ರಲ್ಲಿ ಓದಲಾದ ಆದೇಶದಲ್ಲಿ ಸದರಿ ಯೋಜನೆಯ ಕಾಲಾವಕಾಶವನ್ನು ದಿನಾಂಕ: 29.5.2005 ರಿಂದ ಮುಂದಿನ 2 ವರ್ಷಗಳ ಅವಧಿಗೆ ವಿಸ್ತರಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (5) ರಲ್ಲಿ ಓದಲಾದ ಆದೇಶದಲ್ಲಿ ಸದರಿ ಯೋಜನೆಯ ಕಾಲಾವಕಾಶವನ್ನು ದಿನಾಂಕ: 29.5.2007 ರಿಂದ ಮುಂದಿನ 18 ತಿಂಗಳ ಅವಧಿಗೆ ವಿಸ್ತರಿಸಲಾಗಿದೆ.

ಭೂಸ್ವಾಧೀನ ಪ್ರಕ್ರಿಯೆಯಲ್ಲಿ ವಿಳಂಬವಾಗಿರುವ ಹಿನ್ನೆಲೆಯಲ್ಲಿ, ಸದರಿ ಯೋಜನೆಯ ಅನುಷ್ಠಾನದ ಕಾಲಾವಧಿಯನ್ನು ದಿನಾಂಕ: 29.11.2008 ರಿಂದ ಮುಂದಿನ 1 ವರ್ಷದ ಅವಧಿಗೆ ವಿಸ್ತರಿಸುವಂತೆ ಅಭಿವೃದ್ಧಿದಾರರು ಕೋರಿದ್ದು ಅದನ್ನು ಪರಿಗಣಿಸುವಂತೆ ಮೇಲೆ ಕ್ರಮ ಸಂಖ್ಯೆ (6) ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಸರ್ಕಾರಕ್ಕೆ ಶಿಫಾರಸ್ಸು ಮಾಡಿ, ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 22 ಎನ್‌ಸಿಇ 2009, ಬೆಂಗಳೂರು, ದಿನಾಂಕ: 17ನೇ ಫೆಬ್ರವರಿ 2009.**

ಮೆ:: ಪ್ರಸನ್ನ ಪವರ್ ಲಿಮಿಟೆಡ್ ಕಂಪನಿಯವರಿಗೆ ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲ್ಲೂಕಿನ ಅಣಿಯೂರು ಗ್ರಾಮದ ಬಳಿ ಹಂಚಿಕೆಯಾಗಿರುವ 6.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನ ಮಾಡಲು ಕಾಲಾವಕಾಶವನ್ನು ದಿನಾಂಕ: 29.11.2008 ರಿಂದ ಮುಂದಿನ 1 (ಒಂದು) ವರ್ಷದ ಅವಧಿಗೆ ವಿಸ್ತರಿಸಲಾಗಿದೆ.

ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಹಂಚಿಕೆ ಆದೇಶದ ಇತರೆ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.655

**ಎಸ್.ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ,

ವಿಷಯ: ಮೆ:: ವೇನಿಕಾ ಹೈಡ್ರೊ ಪ್ರಾಜೆಕ್ಟ್ ಪ್ರೈವೇಟ್ ಲಿಮಿಟೆಡ್ ಕಂಪನಿಯ ಗೊನಾಲ್ SHP-II (2x1000kw) ಯೋಜನೆಯನ್ನು ಮೆ:: ಅಂತರ್‌ಗಂಗೆ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ವರ್ಗಾಯಿಸುವ ಬಗ್ಗೆ.

ಓದಲಾಗಿದೆ:
1) ಸರ್ಕಾರಿ ಆದೇಶ ಸಂಖ್ಯೆ: ಇಂಇ 277 ಎನ್‌ಸಿಇ 2005 ದಿನಾಂಕ: 14.10.2005.
2) ಸರ್ಕಾರಿ ಆದೇಶ ಸಂಖ್ಯೆ: ಇಎನ್ 250 ಎನ್‌ಸಿಇ 2006 ದಿನಾಂಕ: 24.6.2006.
3) ಸರ್ಕಾರಿ ಆದೇಶ ಸಂಖ್ಯೆ: ಇಎನ್ 420 ಎನ್‌ಸಿಇ 2006 ದಿನಾಂಕ: 8.11.2006.
4) ಸರ್ಕಾರಿ ಆದೇಶ ಸಂಖ್ಯೆ: ಇಎನ್ 36 ಎನ್‌ಸಿಇ 2007 ದಿನಾಂಕ: 14.2.2007.

5) ಸರ್ಕಾರಿ ಆದೇಶ ಸಂಖ್ಯೆ: ಇಎನ್ 114 ಎನ್‌ಸಿಇ 2007 ದಿನಾಂಕ: 21.3.2007.

6) ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ರವರ ಪತ್ರ ಸಂಖ್ಯೆ: ಕೆಆರ್‌ಡಿಇ/06/ಗೊನಾಲ್/08/2002 ದಿನಾಂಕ: 26/27.11.2008.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಆದೇಶದಲ್ಲಿ ಮೆ:: ವೆನಿಕಾ ಹೈಡ್ರೊ ಪ್ರಾಜೆಕ್ಟ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಗುಲ್ಬರ್ಗಾ ಜಿಲ್ಲೆಯ ಶೋರಾಪುರ ತಾಲ್ಲೂಕಿನ ನಾಗರಾಳ ಗ್ರಾಮದ ಬಳಿ ಕೃಷ್ಣ ನದಿಯ ಉಪ ನದಿಯಾದ ದೇವಪುರ ನಾಲೆಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಅಂತರಾಳ–ನಾಗರಾಳ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಆದೇಶದಲ್ಲಿ ಸದರಿ ಕಂಪನಿಗೆ ಹಂಚಿಕೆಯಾಗಿರುವ ಸಾಮರ್ಥ್ಯವನ್ನು 2.00 ಮೆಗಾ ವ್ಯಾಟ್‌ನಿಂದ 4.00 ಮೆಗಾ ವ್ಯಾಟ್‌ಗೆ ಹೆಚ್ಚಿಸಿ ಯೋಜನೆಯ ಹೆಸರನ್ನು ಗೊನಾಲ್ ಕಿರು ಜಲ ವಿದ್ಯುತ್ ಯೋಜನೆ ಎಂದು ಬದಲಾಯಿಸಿ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿದೆ.

ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಆದೇಶದಲ್ಲಿ ಸದರಿ ಯೋಜನೆಯ ಸಾಮರ್ಥ್ಯವನ್ನು 4.00 ಮೆಗಾ ವ್ಯಾಟ್‌ನಿಂದ 6.5 ಮೆಗಾ ವ್ಯಾಟ್‌ಗೆ ಹೆಚ್ಚಿಸಿ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿದೆ.

ಮೇಲೆ ಕ್ರಮ ಸಂಖ್ಯೆ (4) ರಲ್ಲಿ ಓದಲಾದ ಆದೇಶದಲ್ಲಿ ಸದರಿ ಯೋಜನೆಯ ಸಾಮರ್ಥ್ಯವನ್ನು 6.5 ಮೆಗಾ ವ್ಯಾಟ್‌ನಿಂದ 10.25 ಮೆಗಾ ವ್ಯಾಟ್‌ಗೆ ಹೆಚ್ಚಿಸಿ, ಗೊನಾಲ್ SHP-I (2x875kw), ಗೊನಾಲ್ SHP-II (2x1000kw) ಮತ್ತು ಗೊನಾಲ್ SHP-III (2x3250kw) ಎಂದು ಮೂರು ಹಂತಗಳಲ್ಲಿ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿದೆ.

ಮೇಲ್ಕಂಡಂತೆ ವಿಂಗಡಿಸಲಾದ ನಂತರ ಗೊನಾಲ್ SHP-III (2x3250kw) ಯೋಜನೆಯನ್ನು ಮೆ:: ಸೌತ್ ವೆಸ್ಟ್ ಹೈಡ್ರೊ ಪವರ್ ಪ್ರೈವೇಟ್ ಲಿಮಿಟೆಡ್‌ಗೆ ಮೇಲೆ ಕ್ರಮ ಸಂಖ್ಯೆ (5) ರಲ್ಲಿ ಓದಲಾದ ಆದೇಶದಲ್ಲಿ ವರ್ಗಾಯಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (6) ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಗೊನಾಲ್ SHP-II (2x1000kw) ಯೋಜನೆಯನ್ನು ಮೆ:: ಅಂತರ್‌ಗಂಗೆ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ವರ್ಗಾಯಿಸಲು ಅಭಿವೃದ್ಧಿದಾರರು ಕೋರಿಕೆಯನ್ನು ಸಲ್ಲಿಸಿದ್ದು, ಅದನ್ನು ಪರಿಗಣಿಸುವಂತೆ ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಮೇಲಿನ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 417 ಎನ್‌ಸಿಇ 2008, ಬೆಂಗಳೂರು, ದಿನಾಂಕ: 12.2.2009.**

ಮೆ:: ವೆನಿಕಾ ಹೈಡ್ರೊ ಪ್ರಾಜೆಕ್ಟ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಗುಲ್ಬರ್ಗಾ ಜಿಲ್ಲೆಯ ಶೋರಾಪುರ ತಾಲ್ಲೂಕಿನ ನಾಗರಾಳ ಗ್ರಾಮದ ಬಳಿ ಕೃಷ್ಣ ನದಿಯ ಉಪ ನದಿಯಾದ ದೇವಪುರ ನಾಲೆಗೆ ಅಡ್ಡಲಾಗಿ ಹಂಚಿಕೆ ಮಾಡಿ ಮೂರು ಹಂತಗಳಲ್ಲಿ ಅನುಷ್ಠಾನ ಮಾಡಲು ಅನುಮತಿಸಿರುವ ಯೋಜನೆಗಳಲ್ಲಿ ಗೊನಾಲ್ SHP-II (2x1000kw) ಯೋಜನೆಯನ್ನು ಮೆ:: ಅಂತರ್‌ಗಂಗೆ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ವರ್ಗಾಯಿಸಲು ಅನುಮತಿ ನೀಡಲಾಗಿದೆ.

ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಓದಲಾದ (1) ರ ಸರ್ಕಾರಿ ಆದೇಶದ ಇತರೆ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 656

**ಎಸ್.ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ವಿಷಯ:** ಮೆ:: ಮಹದೇಶ್ವರ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ:** 1 ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : ಕೆಆರ್‌ಇಡಿ/06/ಗಾಂಧಿನಗರ/09/858 ದಿನಾಂಕ: 13.2.2009.

2 ದಿನಾಂಕ: 13.2.2009 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ:: ಮಹದೇಶ್ವರ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಚಾಮರಾಜನಗರ ಜಿಲ್ಲೆಯ

ಕೊಳ್ಳೆಗಾಲ ತಾಲ್ಲೂಕಿನ ಅರಬಿಗೆರೆ/ದೇವರ್‌ಹಳ್ಳಿ ಗ್ರಾಮದ ಬಳಿ ಕಾವೇರಿ ನದಿಗೆ ಅಡ್ಡಲಾಗಿ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಹಂಚಿಕೆ ಸಮಿತಿ ಸಭೆಯ ನಡವಳಿಯ ಪುಟ ಸಂಖ್ಯೆ: 20 ರ ಕ್ರಮ ಸಂಖ್ಯೆ: 85 ರಲ್ಲಿ ಹಂಚಿಕೆ ಸಮಿತಿಯು ಶಿಫಾರಸ್ಸು ಮಾಡಿರುವ ಹಿನ್ನೆಲೆಯಲ್ಲಿ, ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ:

**ಸರ್ಕಾರದ ಆದೇಶ ಸಂಖ್ಯೆ: ಇಎನ್ 32 ಎನ್‌ಸಿಇ 2009, ಬೆಂಗಳೂರು, ದಿನಾಂಕ: 17ನೇ ಫೆಬ್ರವರಿ 2009.**

ಮೆ:: ಮಹದೇಶ್ವರ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಚಾಮರಾಜನಗರ ಜಿಲ್ಲೆಯ ಕೊಳ್ಳೆಗಾಲ ತಾಲ್ಲೂಕಿನ ಅರಬಿಗೆರೆ/ದೇವರ್‌ಹಳ್ಳಿ ಗ್ರಾಮದ ಬಳಿ ಕಾವೇರಿ ನದಿಗೆ ಅಡ್ಡಲಾಗಿ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು (Weir-**Latitude**: 12°11'44" N & **Longitude**: 77°30'30''E and Power House- **Latitude**: 12°12'00" N & **Longitude**: 77°32'44''E) ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ:

1(ಅ) ಸದರಿ ಯೋಜನೆಯಿಂದ ಕೆಳ ತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.

(ಆ) ಹಂಚಿಕೆದಾರರು ಈ ಆದೇಶ ಹೊರಡಿಸಿದ ಮೂರು ತಿಂಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಇ) ಅಂತಹ ಒಡಂಬಡಿಕೆಯನ್ನು ರೂ. 400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(ಈ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್) ಪರಿಷ್ಕರಿಸಲು ಮೆಗಾವಾಟ್ ಒಂದಕ್ಕೆ ರೂ. 25,000.00 ದಂತೆ ರೂ. 1.00 ಲಕ್ಷಕ್ಕೆ ಕಡಿಮೆ ಇಲ್ಲದಂತೆ ಪಾವತಿಸತಕ್ಕದ್ದು.

2(ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಅರಣ್ಯ, ಜೀವಿಶಾಸ್ತ್ರ & ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3 ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಶಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

4 ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5 ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6 ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7 ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ / ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

8. ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರು ಸರ್ಕಾರಿ ಜಲ ವಿದ್ಯುತ್ / ನೀರಾವರಿ / ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದ್ದಲ್ಲಿ ಯಾವುದೇ ಪರಿಹಾರವನ್ನು ಅಭಿವೃದ್ಧಿದಾರರು ನಿರೀಕ್ಷಿಸುವಂತಿಲ್ಲ.

9. ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.

10 ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಯಾವುದೇ ಯೋಜನೆಗಳಿಂದಾಗಿ ಸದರಿ ಯೋಜನೆಯು ಮುಳುಗಡೆಯಾದಲ್ಲಿ, ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಪೂರ್ಣ ಜವಾಬ್ದಾರರಾಗಿರುತ್ತಾರೆ.

11 ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.657

**ಎಸ್.ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ

**ವಿಷಯ:** ಮೆ:: ವೆನಿಕಾ ಗ್ರೀನ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಹಂಚಿಕೆಯಾಗಿರುವ 250 ಕಿ.ವ್ಯಾ. ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಮೆ:: ಮಾನಸ ಸರೋವರ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ವರ್ಗಾಯಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಇಂಇ 61 ಎನ್‌ಸಿಇ 2004, ದಿನಾಂಕ: 13.2.2004.
2) ಸರ್ಕಾರಿ ಆದೇಶ ಸಂಖ್ಯೆ: ಇಂಇ 61 ಎನ್‌ಸಿಇ 2004 ದಿನಾಂಕ: 22.3.2004.
3) ಸರ್ಕಾರಿ ಆದೇಶ ಸಂಖ್ಯೆ: ಇಎನ್ 1 ಎನ್‌ಸಿಇ 2007 ದಿನಾಂಕ: 14.2.2007.
4) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಹರಿಹರ/2008/2003 ದಿನಾಂಕ: 26/27.11.2008.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೆ:: ವೆನಿಕಾ ಗ್ರೀನ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರಿಗೆ ದಾವಣಗೆರೆ ಬ್ರಾಂಚ್ ಕೆನಾಲ್‌ನ ಭದ್ರ ಬಲದಂಡೆ ಕಾಲುವೆಯಲ್ಲಿ 200 ಕಿಲೊ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಯೋಜನೆಯ ಸಾಮರ್ಥ್ಯವನ್ನು 200 ಕಿಲೊ ವ್ಯಾಟ್‌ನಿಂದ 250 ಕಿಲೊ ವ್ಯಾಟ್‌ಗೆ ಹೆಚ್ಚಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಆದೇಶದಲ್ಲಿ ಸದರಿ ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು ದಿನಾಂಕ: 21.3.2007 ರಿಂದ ಮುಂದಿನ ಮೂರು ವರ್ಷಗಳ ಅವಧಿಗೆ ವಿಸ್ತರಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ದಾವಣಗೆರೆ ಜಿಲ್ಲೆಯ ದಾವಣಗೆರೆ ಬ್ರಾಂಚ್ ಕೆನಾಲ್‌ನ ಭದ್ರ ಬಲದಂಡೆ ಕಾಲುವೆಯಲ್ಲಿ ಮೆ:: ವೆನಿಕಾ ಗ್ರೀನ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಅನುಮತಿಸಲಾದ 250 ಕಿಲೊ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಮೆ:: ಮಾನಸ ಸರೋವರ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯ ಹೆಸರಿಗೆ ವರ್ಗಾಯಿಸುವಂತೆ ಕೋರಿರುವ ಮನವಿಯನ್ನು ಪರಿಗಣಿಸುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 257 ಎನ್‌ಸಿಇ 2008, ಬೆಂಗಳೂರು, ದಿನಾಂಕ: 12ನೇ ಫೆಬ್ರವರಿ 2009.**

ಮೆ:: ವೆನಿಕಾ ಗ್ರೀನ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ದಾವಣಗೆರೆ ಜಿಲ್ಲೆಯ ದಾವಣಗೆರೆ ಬ್ರಾಂಚ್ ಕೆನಾಲ್‌ನ ಭದ್ರ ಬಲದಂಡೆ ಕಾಲುವೆಯಲ್ಲಿ ಅನುಮತಿಸಲಾದ 250 ಕಿಲೊ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಮೆ:: ಮಾನಸ ಸರೋವರ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ವರ್ಗಾಯಿಸಲು ಅನುಮೋದನೆ ನೀಡಲಾಗಿದೆ.

ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಓದಲಾದ (1) ರ ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 658

**ಎಸ್.ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ

**ವಿಷಯ:** ಮೆ:: ಪಾಯಿಂಟೆಕ್ ಪೆನ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ 1.54 ಮೆಗಾ ವ್ಯಾಟ್ ಸಾಮರ್ಥ್ಯದ Bio-mass Gasifier ಯೋಜನೆ ಸ್ಥಾಪನೆಗೆ ನಿರಾಕ್ಷೇಪಣೆ ನೀಡುವ ಬಗ್ಗೆ.

**ಓದಲಾಗಿದೆ:** ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/03/ಪಾಯಿಂಟೆಕ್/08/797ದಿನಾಂಕ: 17/22.5.2008.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು 250 ಕೆ.ಡಬ್ಲ್ಯು ಹೆಚ್ಚಿನ Gasifier ಯೋಜನೆಯು ರಾಜ್ಯದಲ್ಲಿ ಇದುವರೆವಿಗೂ ಮುಂದೆ ಬಂದಿರುವುದಿಲ್ಲವೆಂದು ಹಾಗೂ ಈ ಯೋಜನೆಯು ರಾಜ್ಯದಲ್ಲಿ ಮೊದಲನೆಯದಾಗಿದ್ದು, 1.54 ಮೆಗಾ ವ್ಯಾಟ್ ಸಾಮರ್ಥ್ಯದ Gasifier ಯೋಜನೆಯಾಗಿರುವುದರಿಂದ ಮೆ:: ಪಾಯಿಂಟೆಕ್ ಪೆನ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಗದಗ ಜಿಲ್ಲೆಯ ಮುಂಡರಗಿ ತಾಲ್ಲೂಕಿನಲ್ಲಿ 1.54 ಮೆಗಾ ವ್ಯಾಟ್ ಸಾಮರ್ಥ್ಯದ Bio-mass Gasifier ಯೋಜನೆಯನ್ನು ಸ್ಥಾಪನೆ ಮಾಡಲು ನಿರಾಕ್ಷೇಪಣೆ ನೀಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:

**ಸರ್ಕಾರದ ಆದೇಶ ಸಂಖ್ಯೆ: ಇಎನ್ 145 ಎನ್‌ಸಿಇ 2008, ಬೆಂಗಳೂರು, ದಿನಾಂಕ: 11ನೇ ಫೆಬ್ರವರಿ 2009.**

ಮೆ:: ಪಾಯಿಂಟೆಕ್ ಪೆನ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಗದಗ ಜಿಲ್ಲೆಯ ಮುಂಡರಗಿ ತಾಲ್ಲೂಕಿನಲ್ಲಿ 1.54 ಮೆಗಾ ವ್ಯಾಟ್ ಸಾಮರ್ಥ್ಯದ Bio-mass Gasifier ಯೋಜನೆಯ ಸ್ಥಾಪನೆಗಾಗಿ ಈ ಕೆಳಗಿನ ಷರತ್ತಿಗೊಳಪಟ್ಟು ನಿರಾಕ್ಷೇಪಣೆಯನ್ನು ನೀಡಿದೆ:

1. The company shall obtain separate clearance from Karnataka Power Transmission Corporation Limited in respect of evacuation of power.
2. The company shall enter into wheeling and Banking agreement with Karnataka Power Transmission Corporation Limited in case of selling power to third party and power purchase agreement in case of selling power to Karnataka Power Transmission Corporation Limited.
3. The company shall obtain necessary statutory clearance wherever required from the respective Departments / Organizations such as Forest Department, Revenue Department, & Karnataka State Pollution Control Board, etc. for the Power plant.
4. The Detailed Project Report (D.P.R.) for the power plant shall be got approved by Karnataka Renewable Energy Development Limited, before the commencement of the power plant.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 659

**ಎಸ್.ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ,

**ಜಲಸಂಪನ್ಮೂಲ ಸಚಿವಾಲಯ**

**ವಿಷಯ:** ಗುಲ್ಬರ್ಗಾ ಜಿಲ್ಲೆ, ಚಿಂಚೋಳಿ ತಾಲ್ಲೂಕು, ಚಿಂಚೋಳಿ ಟೌನ್ ಹತ್ತಿರ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ:**

1. ಸರ್ಕಾರದ ಆದೇಶ ಸಂಖ್ಯೆ:ಸನೀಇ 76 ಅಪಿಬಂ 2008, ದಿನಾಂಕ 31/03/08.
2. ದಿನಾಂಕ 06/01/09ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರ ಪತ್ರ ಸಂಖ್ಯೆ:ಮುಇಂ/ಸನೀ(ಉ)ವ/ಬಿಜೆಪಿ/ಎಇ–5/2008–09/71.
3. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ಪತ್ರ ಸಂಖ್ಯೆ:ಮುಸದ/ಆಪ್ತ ಶಾಖೆ/ಟೆಂಡರ್/08–09/375, ದಿನಾಂಕ 12/02/09.

ಪ್ರಸ್ತಾವನೆ:

ಗುಲ್ಬರ್ಗಾ ಜಿಲ್ಲೆ, ಚಿಂಚೋಳಿ ತಾಲ್ಲೂಕು. ಚಿಂಚೋಳಿ ಟೌನ್ ಹತ್ತಿರ ಬ್ಯಾರೇಜ್ ನಿರ್ಮಾಣ ಕಾಮಗಾರಿಯ 140.00 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಮೇಲೆ(1)ರಲ್ಲಿ ಓದಲಾದ ದಿನಾಂಕ 31/03/08ರ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು, ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರು 30/06/08ರಂದು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಗುಲ್ಬರ್ಗಾ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ದ್ವಿಲಕೋಟೆ ಪದ್ಧತಿಯಲ್ಲಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| 1 | ಜಿಲ್ಲಾ ಟೆಂಡರ್ ಬುಲೆಟಿನ್ | ದಿನಾಂಕ 16/08/08 |
| 2 | ರಾಜ್ಯ ಟೆಂಡರ್ ಬುಲೆಟಿನ್ | ದಿನಾಂಕ 18/08/08 |
| 3 | ಕರ್ನಾಟಕ ರಾಜ್ಯಪತ್ರ | ದಿನಾಂಕ 21/08/08 |
| 4 | ಉದಯವಾಣಿ ದಿನಪತ್ರಿಕೆ | ದಿನಾಂಕ 24/08/08 |

ಈ ಟೆಂಡರ್ ಕರೆಗೆ ಪ್ರತಿಕ್ರಯಿಸಿ ಖಾಲಿ ಟೆಂಡರ್ ಫಾರಂ ಪಡೆದ 6 ಜನ ಗುತ್ತಿಗೆದಾರರು ನಿಗದಿತ ದಿನದಂದು ಭರ್ತಿ ಮಾಡಿದ ಪೂರ್ವಾಹತೆ ಟೆಂಡರ್‌ಗಳನ್ನು ಸಲ್ಲಿಸಿರುತ್ತಾರೆ. ಸ್ವೀಕರಿಸಲಾದ ಪೂರ್ವಾಹತೆ ಟೆಂಡರ್‌ಗಳನ್ನು ದಿನಾಂಕ 03/10/08ರಂದು ತೆರೆಯಲಾಗಿ ಇದರಲ್ಲಿ ಅರ್ಹರಾಗಿದ್ದ 5 ಜನ ಗುತ್ತಿಗೆದಾರರು ಆರ್ಥಿಕ ಬಿಡ್‌ನ ಖಾಲಿ ಟೆಂಡರ್‌ನ ಖಾಲಿ ನಮೂನೆಗಳನ್ನು ಪಡೆದಿದ್ದು, ಅದರಲ್ಲಿ 4 ಜನ ಮಾತ್ರ ಭರ್ತಿ ಮಾಡಿದ ವಿವರಗಳೊಂದಿಗೆ ಟೆಂಡರ್‌ಗಳನ್ನು ಸಲ್ಲಿಸಿದ್ದರು. ಈ ಆರ್ಥಿಕ ಬಿಡ್‌ಗಳನ್ನು ದಿನಾಂಕ 27/11/08ರಂದು ತೆರೆಯಲಾಗಿದ್ದು, ಗುತ್ತಿಗೆದಾರರು ನಮೂದಿಸಿರುವ ದರಗಳ ತುಲನಾತ್ಮಕ ವಿವರ ಕೆಳಕಂಡಂತಿದೆ:

| | | | | |
|---|---|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ.1,13,70,194/– |
| ಪರಿಷ್ಕರಿಸಿದ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ.1,23,18,338/– |
| ಕ್ರ.ಸಂ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ |
| 1 | ಎಸ್.ಸಿ.ತಿಳಗುಳ, 1ನೇ ದರ್ಜೆ ಗುತ್ತಿಗೆದಾರರು | ರೂ.1,56,08,154/– | 37.21 ಹೆಚ್ಚು | 26.71 ಹೆಚ್ಚು |
| 2 | ಬಿ.ಜಿ.ನಾಗೂರ, 1ನೇ ದರ್ಜೆ ಗುತ್ತಿಗೆದಾರರು | ರೂ.1,66,78,645/– | 46.68 ಹೆಚ್ಚು | 35.40 ಹೆಚ್ಚು |
| 3 | ಎಸ್.ಆರ್.ಪಾಟೀಲ್, 1ನೇ ದರ್ಜೆ ಗುತ್ತಿಗೆದಾರರು | ರೂ.1,90,31,312/– | 67.37 ಹೆಚ್ಚು | 54.50 ಹೆಚ್ಚು |
| 4 | ಕರಬಸಪ್ಪ ಕರಡಕಲ್, 1ನೇ ದರ್ಜೆ ಗುತ್ತಿಗೆದಾರರು | ರೂ.1,90,74,893/– | 67.76 ಹೆಚ್ಚು | 54.85 ಹೆಚ್ಚು |

ಮೇಲ್ಕಂಡಂತೆ ಕ್ರ.ಸಂ:1ರಲ್ಲಿರುವ ಶ್ರೀ ಎಸ್.ಸಿ. ತಿಳಗುಳ, 1ನೇ ದರ್ಜೆ ಗುತ್ತಿಗೆದಾರರು ಇವರು ನಮೂದಿಸಿರುವ ಮೊತ್ತ ರೂ.1,56,08,154–00ಗಳು ಅತಿ ಕಡಿಮೆ ಮೊತ್ತವಾಗಿದ್ದು, ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 26.71ರಷ್ಟು ಹೆಚ್ಚಾಗಿದ್ದರಿಂದ, ದರಗಳನ್ನು ಕಡಿಮೆ ಮಾಡಿಸುವ ಸಲುವಾಗಿ ಮುಖ್ಯ ಇಂಜಿನಿಯರ್‌ರವರ ಮಟ್ಟದಲ್ಲಿ ಗುತ್ತಿಗೆದಾರರೊಂದಿಗೆ ನಡೆಸಲಾದ ಸಂಧಾನದಲ್ಲಿ ಗುತ್ತಿಗೆದಾರರು ಚಾಲ್ತಿ ದರಗಳ ಮೇಲೆ ಶೇ.23ರಷ್ಟು ಹೆಚ್ಚಿನ ದರಗಳಲ್ಲಿ ಅಂದರೆ ರೂ.1,51,51,556–00ಗಳ ಟೆಂಡರ್ ಮೊತ್ತದಲ್ಲಿ ಕಾಮಗಾರಿಯನ್ನು ನಿರ್ವಹಿಸಲು ಒಪ್ಪಿರುತ್ತಾರೆ. ಆದರೆ, ಚಾಲ್ತಿ ದರಪಟ್ಟಿಯ ಮೇಲೆ ಶೇ.6ಕ್ಕಿಂತ ಹೆಚ್ಚುವರಿ ದರವನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್‌ರವರಿಗೆ ಅಧಿಕಾರ ಇಲ್ಲದಿರುವುದರಿಂದ, ಈ ಮೊತ್ತಕ್ಕೆ ಸದರಿಯವರ ಟೆಂಡರ್‌ನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರು ಮೇಲೆ(2)ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 06/02/09ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ.1,23,18,338–00ಗಳ ಮೇಲೆ ಶೇಕಡ 13.50ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.1,39,81,314–00ಗಳಿಗೆ ಕಾಮಗಾರಿಯನ್ನು ಶ್ರೀ ಎಸ್.ಸಿ. ತಿಳಗುಳ, 1ನೇ ದರ್ಜೆ ಗುತ್ತಿಗೆದಾರರು, ಬಿಜಾಪುರ ಇವರಿಗೆ ವಹಿಸಲು ಸಭೆಯಲ್ಲಿ ತೀರ್ಮಾನಿಸಲಾಗಿದೆ. ಈ ನಿರ್ಧಾರಕ್ಕೆ ಗುತ್ತಿಗೆದಾರರು ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 05 ಅಪಿಬಂ 2009, ಬೆಂಗಳೂರು, ದಿನಾಂಕ 02ನೇ ಮಾರ್ಚ್ 2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಗುಲ್ಬರ್ಗಾ ಜಿಲ್ಲೆ, ಚಿಂಚೋಳಿ ತಾಲ್ಲೂಕು, ಚಿಂಚೋಳಿ ಟೌನ್ ಹತ್ತಿರ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿ ಹಾಗೂ ಪ್ರಸಕ್ತ ಸಾಲಿನ ದರಪಟ್ಟಿಯಂತೆ ಪರಿಷ್ಕರಿಸಿದ ಟೆಂಡರಿಗೆ ಇಡಲಾದ ಮೊತ್ತ ರೂ.1,23,18,338–00ಗಳ ಮೇಲೆ ಶೇಕಡ 13.50ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.1,39,81,314–00ಗಳಿಗೆ (ಒಂದು ಕೋಟಿ ಮೂವತ್ತೊಂಭತ್ತು ಲಕ್ಷದ ಎಂಭತ್ತೊಂದು ಸಾವಿರದ ಮುನ್ನೂರ ಹದಿನಾಲ್ಕು ರೂ.ಗಳು ಮಾತ್ರ) ಶ್ರೀ ಎಸ್.ಸಿ. ತಿಳಗುಳ, 1ನೇ ದರ್ಜೆ ಗುತ್ತಿಗೆದಾರರು, ಬಿಜಾಪುರ ಇವರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.894

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ವಿಷಯ:** ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ತಾಲ್ಲೂಕು, ಸೀಗೆಹಳ್ಳ ಹೊಸಕೆರೆ ಒಡೆದುಹೋದ ಕೋಡಿಯ ಮರು ನಿರ್ಮಾಣ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಸನೀಇ 22 ಕೆಜಿದು 2008, ದಿನಾಂಕ 15/01/09.
2. ದಿನಾಂಕ 19/02/09ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ರವರ ಪತ್ರ ಸಂಖ್ಯೆ: ಮುಸ(ದ)/ತಾಂ–3/ಸಇಂ–8/ ಶಿವಮೊಗ್ಗ/ಸೀಗೆಹಳ್ಳ ಹೊಸಕೆರೆ/ಟೆಂಡರ್/ 2008–09/856.
3. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ರವರ ದಿನಾಂಕ 28/02/08ರ ಪತ್ರ ಸಂಖ್ಯೆ: ಮುಸದ/ಆಪ್ತಶಾಖೆ/ ಟೆಂಡರ್/08–09/1105.

**ಪ್ರಸ್ತಾವನೆ:**

ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ತಾಲ್ಲೂಕು, ಸೀಗೆಹಳ್ಳ ಹೊಸಕೆರೆ ಒಡೆದುಹೋದ ಕೋಡಿಯ ಮರು ನಿರ್ಮಾಣ ಕಾಮಗಾರಿಯ 485.00 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಮೇಲೆ(1)ರಲ್ಲಿ ಓದಲಾದ ದಿನಾಂಕ 15/01/09ರ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಶಿವಮೊಗ್ಗ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ದ್ವಿಲಕೋಟೆ ಪದ್ಧತಿಯಲ್ಲಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| 1 | ಶಿವಮೊಗ್ಗ ಟೆಂಡರ್ ಬುಲೆಟಿನ್ | ದಿನಾಂಕ 09/01/09 |
| 2 | ರಾಜ್ಯ ಟೆಂಡರ್ ಬುಲೆಟಿನ್ | ದಿನಾಂಕ 28/01/09 |
| 3 | ವಿಜಯಕರ್ನಾಟಕ ಹಾಗೂ ದಿ ಇಂಡಿಯನ್ ಎಕ್ಸ್‌ಪ್ರೆಸ್ ದಿನಪತ್ರಿಕೆಗಳು | ದಿನಾಂಕ 4/02/09 |

ಈ ಟೆಂಡರ್ ಕರೆಗೆ ಪ್ರತಿಕ್ರಯಿಸಿ ಖಾಲಿ ಟೆಂಡರ್ ಫಾರಂ ಪಡೆದ ಏಕೈಕ ಗುತ್ತಿಗೆದಾರರು ನಿಗದಿತ ದಿನದಂದು ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸಿರುತ್ತಾರೆ. ಸ್ವೀಕರಿಸಲಾದ ತಾಂತ್ರಿಕ ಬಿಡ್ ಅನ್ನು ದಿನಾಂಕ 13/02/09ರಂದು ತೆರೆಯಲಾಗಿ ಗುತ್ತಿಗೆದಾರರ ಟೆಂಡರ್ ಅರ್ಹತೆ ಹೊಂದಿದ್ದರಿಂದ, ಅವರ ಆರ್ಥಿಕ ಬಿಡ್‌ನ್ನು ದಿನಾಂಕ 13/02/09ರಂದು ತೆರೆಯಲಾಗಿದೆ. ಇದರಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳ ತುಲನಾತ್ಮಕ ವಿವರ ಕೆಳಕಂಡಂತಿದೆ:

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | ರೂ.4,67,47,516/- |
| ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಟೆಂಡರಿಗೆ ಇಡಲಾದ ಮೊತ್ತ | ರೂ.4,82,18,017/- |

| ಕ್ರ. ಸಂ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ | ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ |
|---|---|---|---|---|
| 1 | ಸುಭಾಷ್‌ಚಂದ್ರ ಶೆಟ್ಟಿ, 1ನೇ ದರ್ಜೆ ಗುತ್ತಿಗೆದಾರರು | ರೂ.5,83,98,244/- | 24.93 ಹೆಚ್ಚು | 21.11 ಹೆಚ್ಚು |

ಮೇಲ್ಕಂಡಂತೆ ಶ್ರೀ ಸುಭಾಷ್‌ಚಂದ್ರಶೆಟ್ಟಿ, 1ನೇ ದರ್ಜೆ ಗುತ್ತಿಗೆದಾರರು ಟೆಂಡರ್‌ನಲ್ಲಿ ನಮೂದಿಸಿರುವ ಮೊತ್ತ ರೂ.5,83,98,244-00ಗಳು. ಟೆಂಡರ್‌ನಲ್ಲಿ ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 21.11ರಷ್ಟು ಹೆಚ್ಚಾಗಿದ್ದು, ಈ ಮೊತ್ತಕ್ಕೆ ಸದರಿಯವರ ಟೆಂಡರ್‌ನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರು ಉಲ್ಲೇಖ(2)ರ ಪತ್ರದಲ್ಲಿ ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 21/02/09ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ.4,82,18,017-00ಗಳ ಮೇಲೆ ಶೇಕಡ 14.50ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.5,52,09,629-00ಗಳಿಗೆ ಕಾಮಗಾರಿಯನ್ನು ಶ್ರೀ ಸುಭಾಷ್‌ಚಂದ್ರ ಶೆಟ್ಟಿ, 1ನೇ ದರ್ಜೆ ಗುತ್ತಿಗೆದಾರರು, ಕುಂದಾಪುರ ಇವರಿಗೆ ವಹಿಸಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 06 ಹೊಕೆನಿ 2009, ಬೆಂಗಳೂರು, ದಿನಾಂಕ 28ನೇ ಫೆಬ್ರವರಿ 2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ತಾಲ್ಲೂಕು, ಸೀಗೆಹಳ್ಳ ಹೊಸಕೆರೆಯ ಒಡೆದುಹೋದ ಕೋಡಿಯ ಮರು ನಿರ್ಮಾಣ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿ ಹಾಗೂ ಪ್ರಸಕ್ತ ಸಾಲಿನ ದರಪಟ್ಟಿಯಂತೆ ಪರಿಷ್ಕರಿಸಿದ ಟೆಂಡರಿಗೆ ಇಡಲಾದ ಮೊತ್ತ ರೂ.4,82,18,017-00ಗಳ ಮೇಲೆ ಶೇಕಡ 14.50ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.5,52,09,629-00ಗಳಿಗೆ (ಐದು ಕೋಟಿ ಐವತ್ತೆರಡು ಲಕ್ಷದ ಒಂಭತ್ತು ಸಾವಿರದ ಆರುನೂರ ಇಪ್ಪತ್ತೊಂಭತ್ತು ರೂ.ಗಳು ಮಾತ್ರ) ಶ್ರೀ ಸುಭಾಷ್‌ಚಂದ್ರ ಶೆಟ್ಟಿ, 1ನೇ ದರ್ಜೆ ಗುತ್ತಿಗೆದಾರರು, ಕುಂದಾಪುರ ಇವರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 897

**ಕೆ.ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ವಿಷಯ:** ಗುಲ್ಬರ್ಗಾ ಜಿಲ್ಲೆ, ಆಳಂದ ತಾಲ್ಲೂಕು, ಕೆರೂರು ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿ ಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ 19/12/08ರ ಪತ್ರ ಸಂಖ್ಯೆ:ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/ 2008–09/6696.

**ಪ್ರಸ್ತಾವನೆ:**

ಮೇಲೆ ಓದಲಾದ ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್ ರವರ ಪತ್ರದಲ್ಲಿ ಗುಲ್ಬರ್ಗಾ ಜಿಲ್ಲೆ, ಆಳಂದ ತಾಲ್ಲೂಕು, ಕೆರೂರು ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ನ್ಯಾಯಾಲಯವು ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ರೂ.6,31,284–00ಗಳ ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 10/01/1981.
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 16/09/1986.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಗುಲ್ಬರ್ಗಾ ಸಿವಿಲ್ ನ್ಯಾಯಾಲಯದಲ್ಲಿ ಭೂಸ್ವಾಧೀನ ಪ್ರಕರಣ ದಾಖಲಿಸಿದ್ದು, ಈ ಪ್ರಕರಣದಲ್ಲಿ ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದೆ. ಸಿವಿಲ್ ನ್ಯಾಯಾಲಯದ ತೀರ್ಪಿನ ವಿರುದ್ಧ ಉಚ್ಚ ನ್ಯಾಯಾಲಯದಲ್ಲಿ ಮೇಲ್ಮನವಿ ಸಂಖ್ಯೆ ಎಂಎಫ್ಎ 4016/04 ದಾಖಲಿಸಿದ್ದು, ಸದರಿ ಮೇಲ್ಮನವಿಯು ವಜಾಗೊಂಡಿರುತ್ತದೆ. ಉಚ್ಚ ನ್ಯಾಯಾಲಯದ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಾನೂನು ಇಲಾಖೆಯು ಪತ್ರ ಸಂಖ್ಯೆ:ಲಾ 200 ಎಲ್ಎಸ್ಪಿ 2009, ದಿನಾಂಕ 17/02/09ರಲ್ಲಿ ಅಭಿಪ್ರಾಯ ನೀಡಿದೆ.

ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿರುವ ಪ್ರಕರಣಗಳ ವಿವರ ಕೆಳಕಂಡಂತಿದೆ:

| ಕ್ರ. ಸಂ | ಎಲ್ಎಸಿ ಪ್ರಕರಣ ಸಂ. | ಎಂಎಫ್ಎ | ಕೆರೂರು ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ. | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|---|
| 1 | 228/05 | 4016/04 | 8/1ಎ1 | 9–30 | 6,31,284–00 |

- ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 07 ಭೂಸ್ವಾಪ್ರ 2009, ಬೆಂಗಳೂರು, ದಿನಾಂಕ 16ನೇ ಮಾರ್ಚ್ 2009.**

ಗುಲ್ಬರ್ಗಾ ಜಿಲ್ಲೆ, ಆಳಂದ ತಾಲ್ಲೂಕು, ಕೆರೂರು ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಕೆರೂರು ಗ್ರಾಮಕ್ಕೆ ಸೇರಿದ ಸರ್ವೆ ನಂಬರ್‌ನ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಾಹಾಕಿದ ಪರಿಹಾರ ಧನ ಮೊತ್ತ ರೂ. 6,31,284–00 ಗಳನ್ನು (ಆರು ಲಕ್ಷದ ಮೂವತ್ತೊಂದು ಸಾವಿರದ ಇನ್ನೂರ ಎಂಭತ್ತಾನ್ಲುಕ್ಕು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2008–09ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16/09/2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.898 **ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ವಿಷಯ:** ಶಿವಮೊಗ್ಗ ಜಿಲ್ಲೆ, ಭದ್ರಾವತಿ ತಾಲ್ಲೂಕು ತಡಸ ಗ್ರಾಮದ ಹತ್ತಿರ ಭದ್ರಾ ನದಿಯಿಂದ ತಡಸ ದೊಡ್ಡಕೆರೆಗೆ ನೀರೊದಗಿಸುವ ಏತ ನೀರಾವರಿ ಯೋಜನೆಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ಸನೀಇ 75 ಏನೀಯೋ 2007, ದಿನಾಂಕ 31/03/08.
2. ದಿನಾಂಕ 18/02/09ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ರವರ ಪತ್ರ ಸಂಖ್ಯೆ:ಮುಸ(ದ)/ತಾಂ-3/ಸಇಂ-8/ ಶಿವಮೊಗ್ಗ/ಭದ್ರಾವತಿ/ಟೆಂಡರ್/2008-09/846.
3. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ರವರ ದಿನಾಂಕ 28/02/08ರ ಪತ್ರದ ಸಂಖ್ಯೆ:1105.

**ಪ್ರಸ್ತಾವನೆ:**

ಶಿವಮೊಗ್ಗ ಜಿಲ್ಲೆ, ಭದ್ರಾವತಿ ತಾಲ್ಲೂಕು ತಡಸ ಗ್ರಾಮದ ಹತ್ತಿರ ಭದ್ರಾ ನದಿಯಿಂದ ತಡಸ ದೊಡ್ಡಕೆರೆಗೆ ನೀರೊದಗಿಸುವ ಏತ ನೀರಾವರಿ ಯೋಜನೆಯ 150.00 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಮೇಲೆ(1)ರಲ್ಲಿ ಓದಲಾದ ದಿನಾಂಕ 31/03/08ರ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಶಿವಮೊಗ್ಗ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ದ್ವಿಲಕೋಟೆ ಪದ್ಧತಿಯಲ್ಲಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| 1 | ಶಿವಮೊಗ್ಗ ಟೆಂಡರ್ ಬುಲೆಟಿನ್ | ದಿನಾಂಕ 03/11/07 |
| 2 | ರಾಜ್ಯ ಟೆಂಡರ್ ಬುಲೆಟಿನ್ | ದಿನಾಂಕ 06/11/07 |
| 3 | ಟೈಮ್ಸ್ ಆಫ್ ಇಂಡಿಯಾ ದಿನಪತ್ರಿಕೆ | ದಿನಾಂಕ 07/11/07 |

ಕಾರಣಾಂತರಗಳಿಂದ ಟೆಂಡರ್ ಅಧಿಸೂಚನೆಯನ್ನು ಮುಂದೂಡಿ ಅಂತಿಮವಾಗಿ ದಿನಾಂಕ 04/09/08ರಂದು ಅಧಿಸೂಚನೆ ಹೊರಡಿಸಲಾಗಿದೆ. ಈ ಟೆಂಡರ್ ಕರೆಗೆ ಪ್ರತಿಕ್ರಯಿಸಿ ಖಾಲಿ ಟೆಂಡರ್ ಫಾರಂ ಪಡೆದ 6 ಜನ ಗುತ್ತಿಗೆದಾರರ ಪೈಕಿ 3 ಜನ ಗುತ್ತಿಗೆದಾರರು ನಿಗಧಿತ ದಿನದಂದು ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸಿರುತ್ತಾರೆ. ಆದರೆ, ಇಬ್ಬರು ಗುತ್ತಿಗೆದಾರರು ಟೆಂಡರ್ ನಿಯಮಗಳನ್ನು ಉಲ್ಲಂಘಿಸಿರುವುದರಿಂದ ಇವರ ಟೆಂಡರ್‌ಗಳನ್ನು ಪರಿಗಣಿಸಿರುವುದಿಲ್ಲ. ಉಳಿದ ಏಕೈಕ ಗುತ್ತಿಗೆದಾರರ ತಾಂತ್ರಿಕ ಬಿಡ್‌ನ್ನು ದಿನಾಂಕ 06/10/08ರಂದು ತೆಗೆದಿದ್ದು, ಅರ್ಹತೆ ಹೊಂದಿದ್ದರಿಂದ ಆರ್ಥಿಕ ಬಿಡ್‌ನ್ನು ದಿನಾಂಕ 25/10/08ರಂದು ತೆರೆಯಲಾಗಿದೆ. ಇದರಲ್ಲಿ ಗುತ್ತಿಗೆದಾರರು ನಮೂದಿಸಿರುವ ತುಲನಾತ್ಮಕ ವಿವರ ಕೆಳಕಂಡಂತಿದೆ:

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | ರೂ.1,17,39,022/- |
| ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಟೆಂಡರಿಗೆ ಇಡಲಾದ ಮೊತ್ತ | ರೂ.1,44,91,448/- |

| ಕ್ರ.ಸಂ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರ ಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ | ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ |
|---|---|---|---|---|
| 1 | ಆರ್.ವಿ. ಎಲೆಕ್ಟ್ರಿಕಲ್ ಎಂಟರ್‌ಪ್ರೈಸಸ್, 1ನೇ ದರ್ಜೆ ಗುತ್ತಿಗೆದಾರರು, ಬೆಂಗಳೂರು | ರೂ.1,99,51,410/- | 69.96 ಹೆಚ್ಚು | 37.67 ಹೆಚ್ಚು |

ಮೇಲ್ಕಂಡಂತೆ ಆರ್.ವಿ.ಎಲೆಕ್ಟ್ರಿಕಲ್ ಎಂಟರ್‌ಪ್ರೈಸಸ್, 1ನೇ ದರ್ಜೆ ಗುತ್ತಿಗೆದಾರರು, ಬೆಂಗಳೂರು ರವರು ಟೆಂಡರ್‌ನಲ್ಲಿ ನಮೂದಿಸಿರುವ ಮೊತ್ತ ರೂ.1,99,51,410-00ಗಳು. ಟೆಂಡರ್‌ನಲ್ಲಿ ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 37.67ರಷ್ಟು ಹೆಚ್ಚಾಗಿದ್ದು, ಈ ಮೊತ್ತಕ್ಕೆ

ಸದರಿಯವರ ಟೆಂಡರ್‌ನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ರವರು ಮೇಲೆ ಓದಲಾದ ಉಲ್ಲೇಖ(2)ರ ಪತ್ರದಲ್ಲಿ ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳು ಹೆಚ್ಚೆಂದು ಕಂಡು ಬಂದ ಹಿನ್ನೆಲೆಯಲ್ಲಿ ಈ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 21/02/09ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಟೆಂಡರಿಗಿಡಲಾದ ಮೊತ್ತ ರೂ. 1,44,91,448–00ಗಳ ಮೇಲೆ ಶೇಕಡ 14.60ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.1,66,07,199–00ಗಳಿಗೆ ಕಾಮಗಾರಿಯನ್ನು ಆರ್.ವಿ. ಎಲೆಕ್ಟ್ರಿಕಲ್ ಎಂಟರ್‌ಪ್ರೈಸಸ್, 1ನೇ ದರ್ಜೆ ಗುತ್ತಿಗೆದಾರರು, ಬೆಂಗಳೂರು ಇವರಿಗೆ ವಹಿಸಲು ಸಭೆಯಲ್ಲಿ ನಿರ್ಧರಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 09 ಏನೀಯೋ 2009, ಬೆಂಗಳೂರು, ದಿನಾಂಕ 28ನೇ ಫೆಬ್ರವರಿ 2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶಿವಮೊಗ್ಗ ಜಿಲ್ಲೆ, ಭದ್ರಾವತಿ ತಾಲ್ಲೂಕು ತಡಸ ಗ್ರಾಮದ ಹತ್ತಿರ ಭದ್ರಾ ನದಿಯಿಂದ ತಡಸ ದೊಡ್ಡಕೆರೆಗೆ ನೀರೊದಗಿಸುವ ಏತ ನೀರಾವರಿ ಯೋಜನೆಯ ಮಂಜೂರಾದ ಅಂದಾಜು ಪಟ್ಟಿ ಹಾಗೂ ಪ್ರಸಕ್ತ ಸಾಲಿನ ದರಪಟ್ಟಿಯಂತೆ ಟೆಂಡರಿಗೆ ಇಡಲಾದ ಮೊತ್ತ ರೂ.1,44,91,448–00ಗಳ ಮೇಲೆ ಶೇಕಡ 14.60ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.1,66,07,199–00ಗಳಿಗೆ (ಒಂದು ಕೋಟಿ ಅರವತ್ತಾರು ಲಕ್ಷದ ಏಳು ಸಾವಿರದ ಒಂದು ನೂರ ತೊಂಭತ್ತೊಂಭತ್ತು ರೂ.ಗಳು ಮಾತ್ರ) ಆರ್.ವಿ.ಎಲೆಕ್ಟ್ರಿಕಲ್ ಎಂಟರ್‌ಪ್ರೈಸಸ್, 1ನೇ ದರ್ಜೆ ಗುತ್ತಿಗೆದಾರರು, ಬೆಂಗಳೂರು ಇವರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.893

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ವಿಷಯ:** ರಾಮನಗರ ಜಿಲ್ಲೆ, ಕನಕಪುರ ತಾಲ್ಲೂಕು, ದೊಡ್ಡಾಲಹಳ್ಳಿ ಕೆರೆ ನಾಲೆಗಳ ಉಳಿಕೆ ಲೈನಿಂಗ್ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ಸನೀಇ 39 ಕೆಜಿದು 2007, ದಿನಾಂಕ 24/02/07.
2. ದಿನಾಂಕ 29/01/09ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ರವರ ಪತ್ರ ಸಂಖ್ಯೆ:ಮುಸ(ದ)/ತಾಂ–2/ಸಇಂ–1/ ದೊಡ್ಡಾಲಹಳ್ಳಿ/2009/389.
3. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ಪತ್ರ ಸಂಖ್ಯೆ:ಮುಸದ/ಆಪ್ತ ಶಾಖೆ/ಟೆಂಡರ್/08–09/375, ದಿನಾಂಕ 12/02/09.

**ಪ್ರಸ್ತಾವನೆ:**

ರಾಮನಗರ ಜಿಲ್ಲೆ, ಕನಕಪುರ ತಾಲ್ಲೂಕು, ದೊಡ್ಡಾಲಹಳ್ಳಿ ಕೆರೆ ನಾಲೆಗಳ ಉಳಿಕೆ ಲೈನಿಂಗ್ ಕಾಮಗಾರಿಯ 40.00 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಮೇಲೆ(1)ರಲ್ಲಿ ಓದಲಾದ ದಿನಾಂಕ 24/02/07ರ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು, ಮುಖ್ಯ ಇಂಜಿನಿಯರ್‌ರವರು ದಿನಾಂಕ 24/02/07ರಲ್ಲಿ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬೆಂಗಳೂರು ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| 1 | ಪ್ರಜಾವಾಣಿ ದಿನ ಪತ್ರಿಕೆ | ದಿನಾಂಕ 14/11/08 |
| 2 | ರಾಮನಗರ ಜಿಲ್ಲಾ ಟೆಂಡರ್ ಬುಲೆಟಿನ್ | ದಿನಾಂಕ 01/12/08 |

ಕಾರಣಾಂತರಗಳಿಂದ ಈ ಅಧಿಸೂಚನೆಯನ್ನು ಮುಂದೂಡಿ ದಿನಾಂಕ 29/11/08ರಂದು ಅವಧಿ ವಿಸ್ತರಣೆ ಅಧಿಸೂಚನೆ ಹೊರಡಿಸಿದೆ. ಈ ಟೆಂಡರ್ ಕರೆಗೆ ಪ್ರತಿಕ್ರಯಿಸಿ ಖಾಲಿ ಟೆಂಡರ್ ಫಾರಂ ಪಡೆದ 3 ಜನ ಗುತ್ತಿಗೆದಾರರ ಪೈಕಿ ಇಬ್ಬರು ಗುತ್ತಿಗೆದಾರರು ಮಾತ್ರ ನಿಗದಿತ ದಿನದಂದು ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸಿರುತ್ತಾರೆ. ಟೆಂಡರ್‌ಗಳನ್ನು ದಿನಾಂಕ 11/12/08ರಂದು ತೆರೆಯಲಾಗಿದ್ದು, ಗುತ್ತಿಗೆದಾರರು ನಮೂದಿಸಿರುವ ದರಗಳ ತುಲನಾತ್ಮಕ ವಿವರ ಕೆಳಕಂಡಂತಿದೆ:

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | ರೂ.39,59,166/– |
| ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಟೆಂಡರಿಗೆ ಇಡಲಾದ ಮೊತ್ತ | ರೂ.47,34,187/– |

| ಕ್ರ.ಸಂ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ | ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ |
|---|---|---|---|---|
| 1 | ನರಸಿಂಹೇಗೌಡ, 1ನೇ ದರ್ಜೆ ಗುತ್ತಿಗೆದಾರರು | ರೂ.95,18,880/– | 140.42 ಹೆಚ್ಚು | 101.06 ಹೆಚ್ಚು |
| 2 | ಎನ್.ಮಲ್ಲಿಕಾರ್ಜುನಯ್ಯ, 1ನೇ ದರ್ಜೆ ಗುತ್ತಿಗೆದಾರರು | ರೂ.1,32,32,253/– | 234.22 ಹೆಚ್ಚು | 179.50 ಹೆಚ್ಚು |

ಮೇಲ್ಕಂಡಂತೆ ಕ್ರ.ಸಂ: 1ರಲ್ಲಿರುವ ಶ್ರೀ ನರಸಿಂಹೇಗೌಡ, 1ನೇ ದರ್ಜೆ ಗುತ್ತಿಗೆದಾರರು ಇವರು ನಮೂದಿಸಿರುವ ಮೊತ್ತ ರೂ.95,18,880–00ಗಳು ಅತಿ ಕಡಿಮೆ ಮೊತ್ತವಾಗಿದ್ದು, ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 101.06ರಷ್ಟು ಹೆಚ್ಚಾಗಿದ್ದು, ಈ ಮೊತ್ತಕ್ಕೆ ಸದರಿಯವರ ಟೆಂಡರ್‌ನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ರವರು ಮೇಲೆ 2ರಲ್ಲಿ ಓದಲಾದ ದಿನಾಂಕ 29/01/09ರ ಪತ್ರದಲ್ಲಿ ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 06/02/09ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ.47,34,187–00ಗಳ ಮೇಲೆ ಶೇಕಡ 14.50ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.54,20,644–00ಗಳಿಗೆ ಕಾಮಗಾರಿಯನ್ನು ಶ್ರೀ ನರಸಿಂಹೇಗೌಡ, 1ನೇ ದರ್ಜೆ ಗುತ್ತಿಗೆದಾರರು, ಕನಕಪುರ ಇವರಿಗೆ ವಹಿಸಲು ಸಭೆಯಲ್ಲಿ ತೀರ್ಮಾನಿಸಲಾಗಿದೆ. ಈ ನಿರ್ಧಾರಕ್ಕೆ ಗುತ್ತಿಗೆದಾರರು ಒಪ್ಪಿಗೆಯನ್ನು ಸೂಚಿಸಿರುತ್ತಾರೆಂದು ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 16 ಕೆಜಿದು 2009, ಬೆಂಗಳೂರು, ದಿನಾಂಕ 02ನೇ ಮಾರ್ಚ್ 2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ರಾಮನಗರ ಜಿಲ್ಲೆ, ಕನಕಪುರ ತಾಲ್ಲೂಕು, ದೊಡ್ಡಾಲಹಳ್ಳಿ ಕೆರೆ ನಾಲೆಗಳ ಉಳಿಕೆ ಲೈನಿಂಗ್ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿ ಹಾಗೂ ಪ್ರಸಕ್ತ ಸಾಲಿನ ದರಪಟ್ಟಿಯಂತೆ ಪರಿಷ್ಕರಿಸಿದ ಟೆಂಡರಿಗೆ ಇಡಲಾದ ಮೊತ್ತ ರೂ.47,34,187–00ಗಳ ಮೇಲೆ ಶೇಕಡ 14.50ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.54,20,644–00ಗಳಿಗೆ (ಐವತ್ತ್ನಾಲ್ಕು ಲಕ್ಷದ ಇಪ್ಪತ್ತು ಸಾವಿರದ ಆರುನೂರ ನಲವತ್ತ್ನಾಲ್ಕು ರೂ.ಗಳು ಮಾತ್ರ) ಶ್ರೀ ನರಸಿಂಹೇಗೌಡ, 1ನೇ ದರ್ಜೆ ಗುತ್ತಿಗೆದಾರರು, ಕನಕಪುರ ಇವರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.896

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ವಿಷಯ:** ಗುಲ್ಬರ್ಗಾ ಜಿಲ್ಲೆ, ಚಿತ್ತಾಪುರ ತಾಲ್ಲೂಕು ಹೆಬ್ಬಾಳ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿ ಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ 04/02/09ರ ಪತ್ರ ಸಂಖ್ಯೆ:ಮುಇಂ/ಸನೀ(ಉ)ವ/ಭೂಸ್ವಾಪ್ರ/2008–09/710.

**ಪ್ರಸ್ತಾವನೆ:**

ಮೇಲೆ ಓದಲಾದ ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್ ರವರ ಪತ್ರದಲ್ಲಿ ಗುಲ್ಬರ್ಗಾ ಜಿಲ್ಲೆ, ಚಿತ್ತಾಪುರ ತಾಲ್ಲೂಕು ಹೆಬ್ಬಾಳ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಗುಲ್ಬರ್ಗಾ ಸಿವಿಲ್ ಜಡ್ಜ್ (ಹಿರಿಯ ಶ್ರೇಣಿ) ನ್ಯಾಯಾಲಯದಲ್ಲಿ ಎಲ್.ಎ.ಸಿ. ಪ್ರಕರಣದಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 20/02/1989
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 08/06/1992

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಗುಲ್ಬರ್ಗಾ ಸಿವಿಲ್ ಜಡ್ಜ್ (ಹಿರಿಯ ಶ್ರೇಣಿ) ನ್ಯಾಯಾಲಯದಲ್ಲಿ ಭೂಸ್ವಾಧೀನ ಪ್ರಕರಣವನ್ನು ದಾಖಲಿಸಿದ್ದು, ಈ ಪ್ರಕರಣದಲ್ಲಿ ಸಿವಿಲ್ ನ್ಯಾಯಾಲಯವು ಪ್ರತಿ ಎಕರೆಗೆ ರೂ.33,210/–ಗಳಂತೆ ಭೂಮೌಲ್ಯವನ್ನು ನಿಗದಿಪಡಿಸಿದೆ. ಇದಕ್ಕೆ ತೃಪ್ತರಾಗದ ಭೂಮಾಲೀಕರು ಇನ್ನೂ ಹೆಚ್ಚಿನ ಪರಿಹಾರ ಧನಕ್ಕಾಗಿ ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ಎಂಎಫ್ಎ 7903/05ನ್ನು ದಾಖಲಿಸಿರುತ್ತಾರೆ. ಮಾನ್ಯ ಉಚ್ಚ ನ್ಯಾಯಾಲಯವು ಪ್ರತಿ ಎಕರೆಗೆ ರೂ.38,000/–ಗಳಂತೆ ನಿಗದಿಪಡಿಸಿ ತೀರ್ಪು ನೀಡಿದೆ. ಈ ಎಂಎಫ್ಎ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಾನೂನು ಇಲಾಖೆಯು ಪತ್ರ ಸಂಖ್ಯೆ:ಲಾ 634 ಎಲ್ಎಸ್ಪಿ 2008, ದಿನಾಂಕ 10/04/08ರಲ್ಲಿ ಅಭಿಪ್ರಾಯ ನೀಡಿದೆ.

ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿರುವ ಪ್ರಕರಣಗಳ ವಿವರ ಕೆಳಕಂಡಂತಿದೆ:

| ಕ್ರ. ಸಂ | ಎಲ್ಎಸಿ ಸಂ. | ಎಂಎಫ್ಎ ಸಂಖ್ಯೆ | ಸ.ನಂ. | ವಿಸ್ತೀರ್ಣ ಎ–ಗುಂ. | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|---|
| 1 | 615/02 | 7903/05 | 196/2ಎ | 5–05 | 1,42,146–00 |

- ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 29 ಭೂಸ್ವಾಪ್ರ 2009, ಬೆಂಗಳೂರು, ದಿನಾಂಕ 16ನೇ ಮಾರ್ಚ್ 2009.**

ಗುಲ್ಬರ್ಗಾ ಜಿಲ್ಲೆ, ಚಿತ್ತಾಪುರ ತಾಲ್ಲೂಕು ಹೆಬ್ಬಾಳ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಗುಲ್ಬರ್ಗಾ ಸಿವಿಲ್ ಜಡ್ಜ್ (ಹಿರಿಯ ಶ್ರೇಣಿ) ನ್ಯಾಯಾಲಯದಲ್ಲಿ ಎಲ್.ಎ.ಸಿ. ಪ್ರಕರಣದಲ್ಲಿ ನೀಡಿದ ತೀರ್ಪಿನ ಅನುಸಾರ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಾಹಾಕಿದ ಪರಿಹಾರ ಧನ ಮೊತ್ತ ರೂ.1,42,146–00ಗಳನ್ನು (ಒಂದು ಲಕ್ಷದ ನಲವತ್ತೆರಡು ಸಾವಿರದ ಒಂದು ನೂರ ನಲವತ್ತಾರು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2008–09ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16/09/2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರ ದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.926

**ಕೆ.ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ವಿಷಯ:** ಗುಲ್ಬರ್ಗಾ ಜಿಲ್ಲೆ, ಅಫ್‌ಜಲ್‌ಪುರ ತಾಲ್ಲೂಕು ಮಣ್ಣೂರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ 27/12/08ರ ಪತ್ರ ಸಂಖ್ಯೆ:ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/ 2008–09/6836.

**ಪ್ರಸ್ತಾವನೆ:**

ಮೇಲೆ ಓದಲಾದ ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್ ರವರ ಪತ್ರದಲ್ಲಿ ಗುಲ್ಬರ್ಗಾ ಜಿಲ್ಲೆ, ಅಫ್‌ಜಲ್‌ಪುರ ತಾಲ್ಲೂಕು ಮಣ್ಣೂರ ಸಣ್ಣ ನೀರಾವರಿ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ರೂ. 1,89,418–00ಗಳ ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 02/10/03
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 11/12/06.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಗುಲ್ಬರ್ಗಾದ 3ನೇ ಹೆಚ್ಚುವರಿ ಜಿಲ್ಲಾ ಸಿವಿಲ್ ನ್ಯಾಯಾಲಯದಲ್ಲಿ ಭೂಸ್ವಾಧೀನ ಪ್ರಕರಣಗಳನ್ನು ದಾಖಲಿಸಿದ್ದು, ಈ ಪ್ರಕರಣದಲ್ಲಿ ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದೆ. ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿರುವ ಪ್ರಕರಣಗಳ ವಿವರ ಕೆಳಕಂಡಂತಿದೆ:

| ಕ್ರ. ಸಂ | ಎಲ್‌ಎಸಿ ಸಂಖ್ಯೆ | ಸ.ನಂ. | ವಿಸ್ತೀರ್ಣ ಎ–ಗುಂ. | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|
| 1 | 121/07 | 794/3 | 0–20 | 31218 |
| 2 | 122/07 | 798/4,5,6 | 0–30 | 46111 |
| 3 | 123/07 | 814/4 | 0–20 | 31218 |
| 4 | 124/07 | 815 | 0–20 | 31218 |
| 5 | 125/07 | 795/2 | 0–17 | 26347 |
| 6 | 126/07 | 795/6,8 | 0–15 | 23306 |
| | ಒಟ್ಟು | | | 189418 |

- **ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ.**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 38 ಭೂಸ್ವಾಪ್ರ 2009, ಬೆಂಗಳೂರು, ದಿನಾಂಕ 16ನೇ ಮಾರ್ಚ್ 2009.**

ಗುಲ್ಬರ್ಗಾ ಜಿಲ್ಲೆ, ಅಫ್‌ಜಲ್‌ಪುರ ತಾಲ್ಲೂಕು ಮಣ್ಣೂರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನ ಪಡಿಸಿಕೊಳ್ಳಲಾದ ಮಣ್ಣೂರ ಗ್ರಾಮಕ್ಕೆ ಸೇರಿದ ಸರ್ವೆ ನಂಬರ್‌ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಾಹಾಕಿದ ಪರಿಹಾರ ಧನ ಮೊತ್ತ ರೂ.1,89,418–00ಗಳನ್ನು (ಒಂದು ಲಕ್ಷದ ಎಂಭತ್ತೊಂಭತ್ತು ಸಾವಿರದ ನಾನೂರ ಹದಿನೆಂಟು ರೂ.ಗಳು ಮಾತ್ರ)

ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2008-09ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702-00-800-1-00-ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು-ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16/09/2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರ ದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.925

**ಕೆ.ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ವಿಷಯ:** ಬೆಳಗಾಂ ಜಿಲ್ಲೆ, ಹುಕ್ಕೇರಿ ತಾಲ್ಲೂಕು ಕರಗುಪ್ಪಿ ಗ್ರಾಮದ ಹತ್ತಿರ ಇಂಗುಕೆರೆ ನಿರ್ಮಾಣ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ಸನೀಇ 10 ನಯೋಕಾ 2007, ದಿನಾಂಕ 13/05/08.
2. ದಿನಾಂಕ 05/12/08ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರ ಪತ್ರ ಸಂಖ್ಯೆ:ಮುಇಂ/ಸನೀ(ಉ)ವ/ಬಿಜೆಪಿ/ಎಇ-1/2008-09/6463.

**ಪ್ರಸ್ತಾವನೆ:**

ಹೆಚ್ಚಿನ ಆತ್ಮಹತ್ಯೆ ವರದಿಯಾಗಿರುವ ರಾಜ್ಯದ ಜಿಲ್ಲೆಗಳಲ್ಲಿ ರೈತರ ಪುರ್ನವಸತಿಗಾಗಿ ವಿಶೇಷ ಪ್ಯಾಕೇಜ್‌ನಡಿ 162 ಕಾಮಗಾರಿಗಳನ್ನು ಕೈಗೊಳ್ಳಲು ಮೇಲೆ (1)ರಲ್ಲಿ ಓದಲಾದ ದಿನಾಂಕ 13/05/08ರ ಸರ್ಕಾರದ ಆದೇಶದಲ್ಲಿ ಅನುಮೋದನೆ ನೀಡಲಾಗಿದೆ. ಈ ಆದೇಶದಲ್ಲಿ 53.50 ಲಕ್ಷ ರೂ.ಗಳ ಅಂದಾಜು ಮೊತ್ತದಲ್ಲಿ ಬೆಳಗಾಂ ಜಿಲ್ಲೆ, ಹುಕ್ಕೇರಿ ತಾಲ್ಲೂಕು ಕರಗುಪ್ಪಿ ಹತ್ತಿರ ಇಂಗುಕೆರೆ ನಿರ್ಮಾಣ ಕಾಮಗಾರಿಯು ಸಹ ಸೇರಿದೆ. ಈ ಕಾಮಗಾರಿಗೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರು ಸಿ.ಇ.ಆರ್.ಸಂಖ್ಯೆ:77/ 2008-09ರಲ್ಲಿ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬೆಳಗಾಂ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| 1 | ಜಿಲ್ಲಾ ಟೆಂಡರ್ ಬುಲೆಟಿನ್ | ದಿ:01/09/2008 |
| 2 | ಪ್ರಜಾವಾಣಿ ಮತ್ತು ಕನ್ನಡಪ್ರಭಾ ದಿನಪತ್ರಿಕೆಗಳು | ದಿ:07/09/2008 |
| 3 | ಟೈಮ್ಸ್ ಆಫ್ ಇಂಡಿಯಾ ದಿನಪತ್ರಿಕೆ | ದಿ:08/09/2008 |

ಈ ಟೆಂಡರ್ ಕರೆಗೆ ಪ್ರತಿಕ್ರಯಿಸಿ 6 ಜನ ಗುತ್ತಿಗೆದಾರರು ಖಾಲಿ ಟೆಂಡರ್ ಫಾರಂಗಾಗಿ ಅರ್ಜಿ ಸಲ್ಲಿಸಿ ಟೆಂಡರ್ ಫಾರಂಗಳನ್ನು ಪಡೆದಿದ್ದು, ಈ ಪೈಕಿ ಇಬ್ಬರು ಗುತ್ತಿಗೆದಾರರು ಮಾತ್ರ ನಿಗದಿತ ದಿನದಂದು ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸಿರುತ್ತಾರೆ. ಸ್ವೀಕರಿಸಲಾದ ಟೆಂಡರ್‌ಗಳನ್ನು ದಿನಾಂಕ 15/10/2008ರಂದು ತೆರೆಯಲಾಗಿದ್ದು ಟೆಂಡರ್ ವಿವರಗಳು ಕೆಳಕಂಡಂತಿದೆ:

| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ ಹಾಗೂ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಟೆಂಡರಿಗೆ ಇಡಲಾದ ಮೊತ್ತ | | | ರೂ.51,80,531-00 |
|---|---|---|---|
| ಕ್ರ. ಸಂ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಟೆಂಡರ್‌ಗೆ ಇಡಲಾದ ಮೊತ್ತದ ಮೇಲೆ ಶೇಕಡಾವಾರು ಹೆಚ್ಚಳ |
| 1 | ಎ.ಎಸ್.ಸವಸುದ್ದಿ, 1ನೇ ದರ್ಜೆ ಗುತ್ತಿಗೆದಾರರು, | ರೂ.58,98,415/- | 13.86 ಹೆಚ್ಚು |
| 2 | ಎಂ.ಎಸ್.ದರಗಶೆಟ್ಟಿ, 1ನೇ ದರ್ಜೆ ಗುತ್ತಿಗೆದಾರರು. | ರೂ.60,61,436/- | 17.00 ಹೆಚ್ಚು |

ಮೇಲ್ಕಂಡಂತೆ ಕ್ರ.ಸಂ: 1ರಲ್ಲಿರುವ ಶ್ರೀ ಎ.ಎಸ್. ಸವಸುದ್ದಿ, 1ನೇ ದರ್ಜೆ ಗುತ್ತಿಗೆದಾರರು ನಮೂದಿಸಿರುವ ಮೊತ್ತ ಅತಿ ಕಡಿಮೆ ಮೊತ್ತವಾಗಿದ್ದು, ಟೆಂಡರ್‌ಗೆ ಇಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 13.86ರಷ್ಟು ಹೆಚ್ಚಾಗಿದ್ದು, ಸದರಿ ಗುತ್ತಿಗೆದಾರರೊಂದಿಗೆ ಮುಖ್ಯ ಇಂಜಿನಿಯರ್ ಇವರು ಸಂಧಾನ ನಡೆಸಿದ್ದು ಟೆಂಡರ್‌ಗೆ ಇಡಲಾದ ಮೊತ್ತದ ಮೇಲೆ ಶೇ.13.50ರಷ್ಟು ಹೆಚ್ಚುವರಿ ದರಗಳಿಗೆ ನಿರ್ವಹಿಸಲು ಒಪ್ಪಿರುವುದಾಗಿ ತಿಳಿಸಿ, ಈ ಬಗ್ಗೆ ಮತ್ತೊಮ್ಮೆ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಿ ಟೆಂಡರ್ ಅಂಗೀಕರಿಸಲು ಮುಖ್ಯ ಇಂಜಿನಿಯರ್‌ರವರು ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಟೆಂಡರ್‌ನಲ್ಲಿ ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 23/12/08ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಟೆಂಡರಿಗೆ ಇಡಲಾದ ಮೊತ್ತ ರೂ.51,80,531–00ಗಳ ಮೇಲೆ ಶೇಕಡ 13.00ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.58,54,001–00ಗಳಿಗೆ ಕಾಮಗಾರಿಯನ್ನು ನಿರ್ವಹಿಸಲು ಒಪ್ಪಿದ ಶ್ರೀ ಎ.ಎಸ್.ಸವಸುದ್ದಿ, 1ನೇ ದರ್ಜೆ ಗುತ್ತಿಗೆದಾರರು, ಗೋಕಾಕ್ ಇವರಿಗೆ ವಹಿಸಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುತ್ತಾರೆಂದು ತಿಳಿಸಿ, ಈ ಟೆಂಡರ್‌ನ್ನು ಅಂಗೀಕರಿಸಲು ಟೆಂಡರ್ ಪರಿಶೀಲನಾ ಸಮಿತಿಯು ಶಿಫಾರಸ್ಸು ಮಾಡಿದೆ..

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 51 ಹೊಕೆನಿ 2008, ಬೆಂಗಳೂರು, ದಿನಾಂಕ 09ನೇ ಫೆಬ್ರವರಿ 2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೆಳಗಾಂ ಜಿಲ್ಲೆ, ಹುಕ್ಕೇರಿ ತಾಲ್ಲೂಕು ಕರಗುಪ್ಪಿ ಗ್ರಾಮದ ಹತ್ತಿರ ಇಂಗುಕೆರೆ ನಿರ್ಮಾಣ ಕಾಮಗಾರಿಯ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿ ಹಾಗೂ ಪ್ರಸಕ್ತ ಸಾಲಿನ ದರಪಟ್ಟಿಯಂತೆ ಟೆಂಡರಿಗೆ ಇಡಲಾದ ಮೊತ್ತ ರೂ.51,80,531–00ಗಳ ಮೇಲೆ ಶೇಕಡ 13.00ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.58,54,001–00ಗಳಿಗೆ (ಐವತ್ತೆಂಟು ಲಕ್ಷದ ಐವತ್ತ್ನಾಲ್ಕು ಸಾವಿರದ ಒಂದು ರೂ.ಗಳು ಮಾತ್ರ) ಶ್ರೀ ಎ.ಎಸ್.ಸವಸುದ್ದಿ, 1ನೇ ದರ್ಜೆ ಗುತ್ತಿಗೆದಾರರು, ಗೋಕಾಕ್ ಇವರಿಗೆ ಕೆಳಕಂಡ ಷರತ್ತುಗಳೊಂದಿಗೆ ಕಾಮಗಾರಿಯನ್ನು ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.899

**ಕೆ.ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ವಿಷಯ:** ಬೆಳಗಾಂ ಜಿಲ್ಲೆ, ಸೌದತ್ತಿ ತಾಲ್ಲೂಕು ಬೂದಿಗೊಪ್ಪ ಮತ್ತು ಯರಝುರವಿ ಗ್ರಾಮಗಳ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯ ದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ 08/12/2008ರ ಪತ್ರ ವ್ಯವಹಾರದೊಂದಿಗೆ ಅಂತ್ಯಗೊಂಡಿರುವ ಪತ್ರ ಸಂಖ್ಯೆ:ಮುಇಂ/ ಸನೀ(ಉ)ವ/ ಬಿಜಾ/ಭೂಸ್ವಾಪ್ರ/2008–09/6533.

**ಪ್ರಸ್ತಾವನೆ:**

ಮೇಲೆ ಓದಲಾದ ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್ ರವರ ಪತ್ರದಲ್ಲಿ ಬೆಳಗಾಂ ಜಿಲ್ಲೆ, ಸೌದತ್ತಿ ತಾಲ್ಲೂಕು ಬೂದಿಗೊಪ್ಪ ಮತ್ತು ಯರಝುರವಿ ಗ್ರಾಮಗಳ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸೌದತ್ತಿ ಸಿವಿಲ್ (ಹಿರಿಯ ಶ್ರೇಣಿ) ನ್ಯಾಯಾಲಯವು ಎಲ್.ಎ.ಸಿ. ಪ್ರಕರಣದಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ  ವಿವರಗಳು ಈ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 05/07/2001
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 24/02/2003

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಸೌದತ್ತಿ ಸಿವಿಲ್ (ಹಿರಿಯ ಶ್ರೇಣಿ) ನ್ಯಾಯಾಲಯದಲ್ಲಿ ಭೂಸ್ವಾಧೀನ ಪ್ರಕರಣ (ಎಲ್.ಎ.ಸಿ. ಸಂಖ್ಯೆ:120/03)ವನ್ನು ದಾಖಲಿಸಿದ್ದು, ಈ ಪ್ರಕರಣದಲ್ಲಿ ಸಿವಿಲ್ ನ್ಯಾಯಾಲಯವು ಪ್ರತಿ ಎಕರೆಗೆ ಭೂಮೌಲ್ಯವನ್ನು ರೂ.96,000/–ಗಳಿಗೆ ನಿಗದಿಪಡಿಸಿದೆ ಹಾಗೂ ಈ ಮೊತ್ತದ ಮೇಲೆ ಶೇ.30ರಷ್ಟು ಸೋಲೇಷಿಯಂ ಮತ್ತು 4(1)ರ ಅಧಿಸೂಚನೆ ದಿನಾಂಕದಿಂದ ಪರಿಹಾರ ಧನದ ಐತೀರ್ಪಿನ ದಿನಾಂಕದವರೆಗೆ ಶೇ.12ರಷ್ಟು ಮಾರುಕಟ್ಟೆ ದರವನ್ನು ಪಾವತಿಸುವಂತೆ ಅಲ್ಲದೆ, ಪರಿಹಾರ ಧನದ ಮೇಲೆ ಬಡ್ಡಿಯನ್ನು ಜಮೀನನ್ನು ಕಬ್ಜೆ ಪಡೆದ ದಿನಾಂಕದಿಂದ ಪಾವತಿಸಲು ತೀರ್ಪು ನೀಡಿದೆ.

ಸಿವಿಲ್ ನ್ಯಾಯಾಲಯದ ತೀರ್ಪಿನ ವಿರುದ್ಧ ಉಚ್ಚ ನ್ಯಾಯಾಲಯದಲ್ಲಿ ದಾಖಲಿಸಿದ್ದ ಎಂಎಫ್ಎ ಸಂಖ್ಯೆ:811/04 ದಿನಾಂಕ 06/02/04ರಂದು ವಜಾಗೊಂಡಿದೆ. ಉಚ್ಚ ನ್ಯಾಯಾಲಯದ ಈ ತೀರ್ಪನ್ನು ಪ್ರಶ್ನಿಸಿ ಮಾನ್ಯ ಸರ್ವೋಚ್ಚ ನ್ಯಾಯಾಲಯದಲ್ಲಿ ಸಲ್ಲಿಸಲಾಗಿದ್ದ ಎಸ್.ಎಲ್.ಪಿ. ಸಂಖ್ಯೆ:7067/05 ಸಹ ವಜಾಗೊಂಡಿದೆ. ಹೀಗಾಗಿ ಸಿವಿಲ್ ನ್ಯಾಯಾಲಯದ ತೀರ್ಪಿನ್ನು ಜಾರಿಗೊಳಿಸುವುದು ಅನಿವಾರ್ಯವಾಗಿದೆ. ಈ ಬಗ್ಗೆ ಕಾನೂನು ಇಲಾಖೆಯ ಅಭಿಪ್ರಾಯವನ್ನು ಟಿಪ್ಪಣಿ ಸಂಖ್ಯೆ:ಲಾ 3 ಎಲ್ಐಟಿ–VI 2009, ದಿನಾಂಕ 31/01/2009ರಲ್ಲಿ ಪಡೆಯಲಾಗಿದೆ. ಅದರಂತೆ ಸಿವಿಲ್ ನ್ಯಾಯಾಲಯದ ತೀರ್ಪಿನಂತೆ ಈ ಪ್ರಕರಣದಲ್ಲಿ ಪಾವತಿಸಬೇಕಾಗಿರುವ ಮೊತ್ತದ ವಿವರ ಕೆಳಕಂಡಂತಿದೆ:

| ಕ್ರ. ಸಂ. | ಎಲ್ಎಸಿ ಸಂಖ್ಯೆ | ಗ್ರಾಮ | ಸ.ನಂ. | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ (ಲಕ್ಷ ರೂ.ಗಳಲ್ಲಿ) |
|---|---|---|---|---|---|
| 1 | 120/03 | ಬೂದಿಗೊಪ್ಪ | 216 | 5–14 | 49,41,563–00 |

- ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಸರ್ಕಾರವು ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 55 ಭೂಸ್ವಾಪ್ರ 2008, ಬೆಂಗಳೂರು, ದಿನಾಂಕ 13ನೇ ಫೆಬ್ರವರಿ 2009.**

ಬೆಳಗಾಂ ಜಿಲ್ಲೆ, ಸೌದತ್ತಿ ತಾಲ್ಲೂಕು ಬೂದಿಗೊಪ್ಪ ಮತ್ತು ಯರಝುರವಿ ಗ್ರಾಮಗಳ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣದಲ್ಲಿ ನೀಡಿರುವ ತೀರ್ಪಿನಂತೆ ಲೆಕ್ಕಾಹಾಕಿದ ಪರಿಹಾರ ಧನ ಮೊತ್ತ ರೂ.49,41,563–00 ಗಳನ್ನು (ನಲವತ್ತೊಂಭತ್ತು ಲಕ್ಷದ ನಲವತ್ತೊಂದು ಸಾವಿರದ ಐನೂರ ಅವರತ್ತ್ಮೂರು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2008–09ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್ಡಿ 1 ಟಿಎಫ್ಪಿ 2008, ದಿನಾಂಕ 16/09/2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರ ದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 903

**ಕೆ.ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ವಿಷಯ:** ಬೆಳಗಾಂ ಜಿಲ್ಲೆ, ಹುಕ್ಕೇರಿ ತಾಲ್ಲೂಕು ಕಮತನೂರು ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಕಮತನೂರು ಹಾಗೂ ನಿಡಶೇಷಿ ಗ್ರಾಮಗಳ ಜಮೀನುಗಳಿಗೆ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿ:23/07/08ರ ಪತ್ರ ಸಂಖ್ಯೆ:ಮುಇಂ/ಸನೀ(ಉ)ವ/ಬಿಜಾ/ಭೂಸ್ವಾ/08–09/ 4120.

**ಪ್ರಸ್ತಾವನೆ:**

ಮೇಲೆ ಓದಲಾದ ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್ ರವರ ಪತ್ರದಲ್ಲಿ ಬೆಳಗಾಂ ಜಿಲ್ಲೆ, ಹುಕ್ಕೇರಿ ತಾಲ್ಲೂಕು ಕಮತನೂರು ಹಾಗೂ ನಿಡಶೇಷಿ ಗ್ರಾಮಗಳ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಕಮತನೂರು ಗ್ರಾಮದ ಜಮೀನುಗಳಿಗೆ ಹುಕ್ಕೇರಿ ಸಿವಿಲ್ ಜಡ್ಜ್ (ಹಿರಿಯ ಶ್ರೇಣಿ) ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿದ ತೀರ್ಪು ಹಾಗೂ ಉಚ್ಚ ನ್ಯಾಯಾಲಯವು ಎಂಎಫ್ಎ ಪ್ರಕರಣದಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

| ಕ್ರ. ಸಂ. | ಎಲ್ಎಸಿ ಸಂಖ್ಯೆ | 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ | ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ |
|---|---|---|---|
| 1 | 93/01(ಎಂಎಫ್ಎ 3423/05), 119/01, 103/01 ಮತ್ತು 116/01 | 20/08/92 | 28/03/95 |
| 2 | 161/01, 164/01 & 135/01 | 29/12/94 | 18/05/98 |

ಸ್ವಾಧೀನಕ್ಕೊಳಪಟ್ಟ ಕಮತನೂರು ಗ್ರಾಮದ ಸ.ನಂ.ಗಳ ಜಮೀನಿನ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಐತೀರ್ಪಿನಂತೆ ಹಣ ಪಡೆದು ನಂತರ ಭೂಸ್ವಾಧೀನ ಕಾಯ್ದೆ ಕಲಂ 18(1)ರಲ್ಲಿಯ ಅವಕಾಶದಂತೆ ಹೆಚ್ಚಿನ ಪರಿಹಾರ ಧನಕ್ಕಾಗಿ ನ್ಯಾಯಾಲಯದಲ್ಲಿ ಪ್ರಕರಣಗಳನ್ನು ದಾಖಲಿಸಿ ಶಾಸನಬದ್ಧ ಸವಲತ್ತುಗಳೊಂದಿಗೆ ಹೆಚ್ಚಿನ ಪರಿಹಾರ ಧನಕ್ಕೆ ಆದೇಶ ಪಡೆದುಕೊಂಡಿದ್ದಾರೆ. ಪ್ರಕರಣಗಳ ವಿವರ ಕೆಳಕಂಡಂತಿದೆ:

| ಕ್ರ. ಸಂ | ಎಲ್ಎಸಿ ಎಂಎಫ್ಎ ಸಂ. | ಕಮತನೂರು & ನಿಡಶೇಷಿ ಗ್ರಾಮದ ಸ.ನಂ. | ವಿಸ್ತೀರ್ಣ ಎ-ಗುಂ. | ನ್ಯಾಯಾಲಯವು ನಿಗದಿಪಡಿಸಿರುವ ಮಾರುಕಟ್ಟೆ ದರ (ಪ್ರತಿ ಎಕರೆಗೆ) | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|---|
| 1 | 93/01 3423/05 | 309/14 | 0-18 | ರೂ.22,500/- | 448156 |
| | | 309/15 | 0-15 | ರೂ.1,40,250/- | |
| 2 | 119/01 | 304/5 | 0-10 | ರೂ.1,40,250/- | 175496 |
| | | 304/15 | 0-02 | | |
| | | 304/21 | 0-01 | | |
| 3 | 103/01 | 309/17 | 0-11 | ರೂ.1,40,250/- | 148496 |
| 4 | 116/01 | 18/1/38 | 1-01 | ರೂ.80,000/- | 253913 |
| 5 | 161/01 | 309/26 | 0-14 | ರೂ.1,40,250/ | 170784 |
| 6 | 164/01 | 304/5 | 0-05 | ರೂ.1,40,250/ | 60994 |
| 7 | 135/01 | 305/8 | 0-16 | ರೂ.2,00,000/- | 735291 |
| | | 305/16 | 0-25 | | |
| | ಒಟ್ಟು | | | | **1993130** |

- ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿ.

ಮೇಲ್ಕಂಡ ಎಂಎಫ್ಎ ಸಂಖ್ಯೆ:3423/05ರ ದಿನಾಂಕ 10/08/07ರ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಾನೂನು ಇಲಾಖೆಯು ದಿನಾಂಕ 27/08/08ರ ಪತ್ರ ಸಂಖ್ಯೆ:ಲಾ 1421 ಎಲ್‌ಬಿಎಸ್ 2008ರಲ್ಲಿ ಅಭಿಪ್ರಾಯ ನೀಡಿದೆ ಹಾಗೂ ಮೇಲ್ಕಂಡ ಇನ್ನಿತರ ಎಲ್.ಎ.ಸಿ. ಪ್ರಕರಣಗಳ ತೀರ್ಪುಗಳ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಂದಾಯ ಇಲಾಖೆಯ ಕಾನೂನು ಕೋಶವು ಪತ್ರ ಸಂಖ್ಯೆ:ಆರ್‌ಡಿ 984 ಎಲ್‌ಸಿಬಿ 2008, ದಿನಾಂಕ 13/01/2009ರಲ್ಲಿ ಅಭಿಪ್ರಾಯ ನೀಡಿದೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 111 ಭೂಸ್ವಾಪ್ರ 2008, ಬೆಂಗಳೂರು, ದಿನಾಂಕ 05ನೇ ಮಾರ್ಚ್ 2009.**

ಬೆಳಗಾಂ ಜಿಲ್ಲೆ, ಹುಕ್ಕೇರಿ ತಾಲ್ಲೂಕು ಕಮತನೂರು ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಕಮತನೂರು ಹಾಗೂ ನಿಡಶೇಷಿ ಗ್ರಾಮಗಳಿಗೆ ಸೇರಿದ ಸರ್ವೆ ನಂಬರ್‌ಗಳ ಜಮೀನುಗಳಿಗೆ ಮಾನ್ಯ ಸಿವಿಲ್ ನ್ಯಾಯಾಲಯ ಹಾಗೂ ಉಚ್ಚ ನ್ಯಾಯಾಲಯವು ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಾಹಾಕಿದ ಪರಿಹಾರ ಧನ ಮೊತ್ತ ರೂ.19,93,130-00ಗಳನ್ನು (ಹತ್ತೊಂಭತ್ತು ಲಕ್ಷದ ತೊಂಭತ್ತ್ಮೂರು

ಸಾವಿರದ ಒಂದುನೂರ ಮೂವತ್ತು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2008–09ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂ:ಎಫ್‌ಡಿ 21 ಟಿಎಫ್‌ಪಿ 2006 ದಿನಾಂಕ 02/09/2006ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರ ದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.895

**ಕೆ.ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ವಿಷಯ:** ಗುಲ್ಬರ್ಗಾ ಜಿಲ್ಲೆ, ಗುಲ್ಬರ್ಗಾ ತಾಲ್ಲೂಕು ಭೂಯ್ಯಾರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಭೂಯ್ಯಾರ ಗ್ರಾಮದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ 23/10/2008ರ ಪತ್ರ ಸಂಖ್ಯೆ:ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/ 2007–08/5653.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ 23/10/08ರ ಪತ್ರದಲ್ಲಿ ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್ ರವರ ಪತ್ರದಲ್ಲಿ ಗುಲ್ಬರ್ಗಾ ಜಿಲ್ಲೆ, ಗುಲ್ಬರ್ಗಾ ತಾಲ್ಲೂಕು ಭೂಯ್ಯಾರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಭೂಯ್ಯಾರ ಗ್ರಾಮದ ಜಮೀನುಗಳಿಗೆ ಗುಲ್ಬರ್ಗಾದ ಸಿವಿಲ್ ನ್ಯಾಯಾಲಯವು (ಹಿರಿಯ ಶ್ರೇಣಿ) ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರ ಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಭೂಸ್ವಾಧೀನ ಪ್ರಕರಣದಲ್ಲಿ ಸೇರಿರುವ ಜಮೀನುಗಳ ಭೂಸ್ವಾಧೀನ ಪ್ರಕ್ರಿಯೆಯ ವಿವರಗಳು ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 13/01/94.
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 16/06/95.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳು ತಮ್ಮ ಪರಿಹಾರ ಧನದ ಐತೀರ್ಪಿನಲ್ಲಿ ನೀಡಿದ ಪರಿಹಾರ ಮೊತ್ತವನ್ನು ಪಡೆದ ನಂತರ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಹೆಚ್ಚಿನ ಪರಿಹಾರ ಧನಕ್ಕಾಗಿ ಗುಲ್ಬರ್ಗಾದ ಸಿವಿಲ್ ನ್ಯಾಯಾಲಯದಲ್ಲಿ ದಾಖಲಿಸಲಾಗಿದ್ದ ಎಲ್.ಎ.ಸಿ. ಪ್ರಕರಣಗಳಲ್ಲಿ ಮಾನ್ಯ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನ ಪಾವತಿಸಲು ತೀರ್ಪು ನೀಡಿದೆ. ಪ್ರಕರಣಗಳ ವಿವರ ಕೆಳಕಂಡಂತಿದೆ:

| ಕ್ರ. ಸಂ | ಸ.ನಂ. | ಕ್ಷೇತ್ರ ಎ–ಗುಂ | ಎಲ್ಎಸಿ ಸಂಖ್ಯೆ | ಎಂಎಫ್ಎ ಸಂಖ್ಯೆ | ಪರಿಹಾರ ಮೊತ್ತ (ರೂ.ಗಳಲ್ಲಿ) |
|---|---|---|---|---|---|
| 1 | 30 | 11–00 | 504/99 | 2494/03 | 595661 |
| 2 | 39 | 12–20 | 511/99 | 3831/04 | 496244 |
| | | | | | 1091905 |

- ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ.

ಮೇಲಿನ ಎಲ್ಲಾ ಪ್ರಕರಣಗಳ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಾನೂನು ಇಲಾಖೆಯು ಅಭಿಪ್ರಾಯ ನೀಡಿದೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 146 ಭೂಸ್ವಾಪ್ರ 2008, ಬೆಂಗಳೂರು, ದಿನಾಂಕ 16ನೇ ಮಾರ್ಚ್ 2009.**

ಗುಲ್ಬರ್ಗಾ ಜಿಲ್ಲೆ, ಗುಲ್ಬರ್ಗಾ ತಾಲ್ಲೂಕು ಭೂಯ್ಯಾರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಭೂಯ್ಯಾರ ಗ್ರಾಮದ ಜಮೀನುಗಳಿಗೆ ಗುಲ್ಬರ್ಗಾದ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಾಹಾಕಿದ ಪರಿಹಾರ ಧನ ಮೊತ್ತ ರೂ. 10,91,905–ಗಳನ್ನು (ಹತ್ತು ಲಕ್ಷದ ತೊಂಭತ್ತೊಂದು ಸಾವಿರದ ಒಂಭೈನೂರ ಐದು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2008–09ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16/09/2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.927

**ಕೆ.ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ವಿಷಯ:** ಗದಗ್ ಜಿಲ್ಲೆ, ಶಿರಹಟ್ಟಿ ತಾಲ್ಲೂಕು ಮಜ್ಜೂರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ 22/11/08ರ ಪತ್ರ ಸಂಖ್ಯೆ:ಮುಇಂ/ಸನೀ(ಉ)ವ/ಭೂಸ್ವಾಪ್ರ 2008–09/6178.

**ಪ್ರಸ್ತಾವನೆ:**

ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್ ರವರ ಮೇಲೆ ಓದಲಾದ ಪತ್ರದಲ್ಲಿ ಗದಗ್ ಜಿಲ್ಲೆ, ಶಿರಹಟ್ಟಿ ತಾಲ್ಲೂಕು ಮಜ್ಜೂರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಮಜ್ಜೂರ ಮತ್ತು ವರವಿ ಗ್ರಾಮಗಳ ಜಮೀನುಗಳಿಗೆ ಗದಗ್‌ನ ಸಿವಿಲ್ ನ್ಯಾಯಾಲಯವು (ಹಿರಿಯ ಶ್ರೇಣಿ) ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 21/11/96
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 03/03/2000

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಗದಗ್‌ನ ಸಿವಿಲ್ (ಹಿರಿಯ ಶ್ರೇಣಿ) ನ್ಯಾಯಾಲಯದಲ್ಲಿ ಭೂಸ್ವಾಧೀನ ಪ್ರಕರಣಗಳನ್ನು ದಾಖಲಿಸಿದ್ದು, ಈ ಪ್ರಕರಣಗಳಲ್ಲಿ ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದೆ. ಸಿವಿಲ್ ನ್ಯಾಯಾಲಯದ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಾನೂನು ಇಲಾಖೆಯು ಪತ್ರ ಸಂಖ್ಯೆ:ಲಾ 216 ಎಲ್‌ಬಿಎಸ್ 2007, ದಿನಾಂಕ 02/03/07ರಲ್ಲಿ ಅಭಿಪ್ರಾಯ ನೀಡಿದೆ. ಸಿವಿಲ್ ನ್ಯಾಯಾಲಯದ ತೀರ್ಪಿನಂತೆ ಈ ಪ್ರಕರಣದಲ್ಲಿ ಪಾವತಿಸಬೇಕಾಗಿರುವ ಮೊತ್ತದ ವಿವರ ಕೆಳಕಂಡಂತಿದೆ:

| ಕ್ರ. ಸಂ | ಎಲ್‌ಎಸಿ ಸಂಖ್ಯೆ | ಸ.ನಂ. | ವಿಸ್ತೀರ್ಣ ಎ–ಗುಂ. | ಗ್ರಾಮ | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|---|
| 1 | 300/01 | 91/6ಎ | 0–35 | ವರವಿ | 47162 |
| 2 | 301/01 | 18/3ಬಿ | 2–03 | ಮಜ್ಜೂರ | 111841 |
| 3 | 302/01 | 18/1ಬಿ | 0–30 | ಮಜ್ಜೂರ | 40425 |
| 4 | 303/01 | 79/3ಎ | 0–23 | ವರವಿ | 32340 |

| ಕ್ರ. ಸಂ | ಎಲ್‌ಎಸಿ ಸಂಖ್ಯೆ | ಸ.ನಂ. | ವಿಸ್ತೀರ್ಣ ಎ–ಗುಂ. | ಗ್ರಾಮ | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|---|
| 5 | 304/01 | 96/1 | 1–23 | ವರವಿ | 84891 |
| 6 | 305/01 | 17/1+2+3+4ಬಿ1 | 0–20 | ಮಜ್ಜೂರ | 26949 |
| 7 | 306/01 | 17/1+2+3+4ಬಿ2 | 0–20 | ಮಜ್ಜೂರ | 26949 |
| 8 | 307/01 | 91/3ಎ | 1–32 | ವರವಿ | 97018 |
| 9 | 308/01 | 101/10ಎ | 0–25 | ವರವಿ | 33688 |
| 10 | 309/01 | 12/1ಎ | 0–10 | ಮಜ್ಜೂರ | 13476 |
| | ಒಟ್ಟು | | | | **514739** |

* ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 156 ಭೂಸ್ವಾಪ್ರ 2008, ಬೆಂಗಳೂರು, ದಿನಾಂಕ 16ನೇ ಮಾರ್ಚ್ 2009**

ಗದಗ್ ಜಿಲ್ಲೆ, ಶಿರಹಟ್ಟಿ ತಾಲ್ಲೂಕು ಮಜ್ಜೂರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಮಜ್ಜೂರ ಮತ್ತು ವರವಿ ಗ್ರಾಮಗಳಿಗೆ ಸೇರಿದ ಸರ್ವೆ ನಂಬರ್‌ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ತೀರ್ಪಿನಂತೆ ಲೆಕ್ಕ ಹಾಕಿದ ಪರಿಹಾರ ಧನ ಮೊತ್ತ ರೂ.5,14,739–00ಗಳನ್ನು (ಐದು ಲಕ್ಷದ ಹದಿನಾಲ್ಕು ಸಾವಿರದ ಏಳುನೂರ ಮೂವತ್ತೊಂಭತ್ತು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2008–09ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ "4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16/09/2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 904

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ವಿಷಯ:** 2008–09ನೇ ಸಾಲಿನ ಸವಿವರ ಅಂದಾಜಿನಲ್ಲಿ ಲೆಕ್ಕ ಶೀರ್ಷಿಕೆ 4702 ಅಡಿ ಅನುಮೋದನೆಯಾಗಿರುವ ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರ ವ್ಯಾಪ್ತಿಯಲ್ಲಿ ಬರುವ ಕಾಮಗಾರಿಗಳ ಅಂದಾಜುಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:**
1. ದಿನಾಂಕ: 19.02.2009 ರ ಬಿಜಾಪುರ, ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್‌ರವರ ಪತ್ರ ಸಂಖ್ಯೆ: ಮುಇ/ಸನೀ(ಉ)ವ/ಬಿಜೆಪಿ/ ಎಇ–1/2008–09/1105.
2. ದಿನಾಂಕ: 19.02.2009 ರ ಬಿಜಾಪುರ, ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್‌ರವರ ಪತ್ರ ಸಂಖ್ಯೆ: ಮುಇ/ಸನೀ(ಉ)ವ/ಬಿಜೆಪಿ/ ಎಇ–3/2008–09/1135

**ಪ್ರಸ್ತಾವನೆ:**

2008–09ನೇ ಸಾಲಿನ ಆಯವ್ಯಯದ "ಅಪೆಂಡಿಕ್ಸ್–ಇ" ನ ಲೆಕ್ಕ ಶೀರ್ಷಿಕೆ 4702–00–101–1–07–139–ಕೆರೆಗಳ ಆಧುನಿಕರಣ (ಪ್ರಧಾನ ಕಾಮಗಾರಿಗಳು) ಹಾಗೂ ಲೆಕ್ಕ ಶೀರ್ಷಿಕೆ 4702–00–101–3–01–422–ಏತ ನೀರಾವರಿ ಯೋಜನೆ (ವಿಶೇಷ ಘಟಕ ಯೋಜನೆ) ಅಡಿ ಅಂದಾಜಿನ ಶೇ.30ರಷ್ಟು ಅನುದಾನದೊಂದಿಗೆ ಸೇರಿರುವ 2 ಕಾಮಗಾರಿಗಳ (ಕಾಮಗಾರಿಗಳ ವಿವರಗಳನ್ನು ಅನುಬಂಧದಲ್ಲಿ ತಿಳಿಸಲಾಗಿದೆ) ಅಂದಾಜು ಪಟ್ಟಿಗಳಿಗೆ (ಅಂದಾಜು ಮೊತ್ತ 495.00ಲಕ್ಷ

ರೂ.ಗಳು) ಆಡಳಿತಾತ್ಮಕ ಅನುಮೋದನೆ ನೀಡುವಂತೆ ಮೇಲೆ ಓದಲಾದ ಪತ್ರಗಳಲ್ಲಿ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್‌ರವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಆಡಳಿತಾತ್ಮಕ ಅನುಮೋದನೆಗೆ ಕೋರಿರುವ ಕಾಮಗಾರಿಗಳ ಅಂದಾಜು ಪಟ್ಟಿಗಳನ್ನು 2008–09ನೇ ಸಾಲಿಗೆ ಮುಂದುವರೆಸಿರುವ 2007–08ನೇ ಸಾಲಿನ ಸಣ್ಣ ನೀರಾವರಿ ಬೆಳಗಾವಿ ವೃತ್ತದ ದರಪಟ್ಟಿಯ ದರಗಳನ್ನು ಅಳವಡಿಸಿ ತಯಾರಿಸಲಾಗಿದೆ. ಈ ಕಾಮಗಾರಿಗಳು ಆರ್ಥಿಕವಾಗಿ ಹಾಗೂ ತಾಂತ್ರಿಕವಾಗಿ ಶಕ್ಯವಾಗಿದೆ.

ಪ್ರಸ್ತಾಪಿಸಿರುವ ಕಾಮಗಾರಿಗಳ ಅಂದಾಜು ಮೊತ್ತ, ಆಯವ್ಯಯದ ಲೆಕ್ಕ ಶೀರ್ಷಿಕೆ, ಅನುದಾನ, ಕಾಮಗಾರಿಯ ಸ್ವರೂಪ ಹಾಗೂ ಅಂದಾಜಿನಲ್ಲಿ ಅಳವಡಿಸಿರುವ ಕೆಲಸಗಳ ವಿವರ, ಸೃಷ್ಟಿಯಾಗಲಿರುವ ಹೊಸ ಅಚ್ಚುಕಟ್ಟು ಹಾಗೂ ಲಾಭ ವೆಚ್ಚದ ಅನುಪಾತ ವಿವರಗಳನ್ನು ಅನುಬಂಧದಲ್ಲಿ ಕಾಮಗಾರಿವಾರು ನೀಡಲಾಗಿದೆ.

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 15 ಮಸಾವಿ 2009 (3) ಬೆಂಗಳೂರು, ದಿನಾಂಕ: 26ನೇ ಫೆಬ್ರವರಿ 2009.**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ವ್ಯಾಪ್ತಿಗೆ ಬರುವ ಅಡಕಗಳಿಸಿರುವ ಅನುಬಂಧದಲ್ಲಿ ತಿಳಿಸಿರುವ ಒಟ್ಟು ರೂ 495.00 ಲಕ್ಷ (ನಾಲ್ಕು ನೂರ ತೊಂಬತ್ತೈದು ಲಕ್ಷ ರೂ.) ಮೊತ್ತದ 2 ಕಾಮಗಾರಿಗಳ ಅಂದಾಜು ಪಟ್ಟಿಗಳಿಗೆ ಕೆಳಕಂಡ ಷರತ್ತಿಗೊಳಪಟ್ಟು ಸರ್ಕಾರವು ಆಡಳಿತಾತ್ಮಕ ಅನುಮೋದನೆ ನೀಡಿದೆ.

1) ಕಾಮಗಾರಿಯ ವೆಚ್ಚವು ಯಾವುದೇ ಕಾರಣಕ್ಕೂ ಅನುಮೋದಿಸಿದ ಟೆಂಡರ್ ಮೊತ್ತಕ್ಕಿಂತ ಹೆಚ್ಚಾಗಬಾರದು ಹಾಗೂ ಕಾಮಗಾರಿಯನ್ನು ಕಾಲಮಿತಿಯೊಳಗೆ ಪೂರ್ಣಗೊಳಿಸತಕ್ಕದ್ದು.
2) ಒಂದು ವೇಳೆ ಸ್ಥಳ ಪರಿಸ್ಥಿತಿಗೆ ಅನುಗುಣವಾಗಿ ಹೆಚ್ಚಳ ನಿರೀಕ್ಷಿಸಿದಲ್ಲಿ ತಕ್ಷಣವೇ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದು ಕಾಮಗಾರಿಯನ್ನು ಪೂರ್ಣಗೊಳಿಸತಕ್ಕದ್ದು.
3) ಕಾಮಗಾರಿ ಪ್ರಾರಂಭಿಸುವ ಮುನ್ನ ವಿನ್ಯಾಸ ಬದಲಾವಣೆಯಿಂದಾಗಿ ಅಥವಾ ಬೇರೆ ಕಾರಣದಿಂದ ಅನುಮೋದಿಸಿದ ಅಂದಾಜು ಮೊತ್ತ ಹೆಚ್ಚಾಗುವ ಸಂಭವ ಇದ್ದಲ್ಲಿ,
4) ತಕ್ಷಣ ಪರಿಷ್ಕೃತ ಅಂದಾಜಿಗೆ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದು ನಂತರ ಕಾಮಗಾರಿಯನ್ನು ಪ್ರಾರಂಭಿಸುವುದು.
5) ಕಾಮಗಾರಿಯ ಅಂದಾಜು ಪಟ್ಟಿಗೆ ಸಂಬಂಧಿಸಿದಂತೆ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿ/ ತಾಂತ್ರಿಕ ಸಮಿತಿಯು ಸಭೆಯಲ್ಲಿ ನೀಡಿರುವ ಸೂಚನೆಗಳನ್ನು ಚಾಚೂ ತಪ್ಪದೇ ಪಾಲಿಸತಕ್ಕದ್ದು.
6) ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999ರ ಅನುಸಾರ ಟೆಂಡರ್ ಕರೆದು ತೆಗೆದುಕೊಳ್ಳತಕ್ಕದ್ದು.
7) ಕಾಮಗಾರಿ ಪೂರ್ಣಗೊಂಡ ಕೂಡಲೇ ಪಿ.ಸಿ.ಆರ್ ವರದಿಯನ್ನು ಸಲ್ಲಿಸತಕ್ಕದ್ದು ಹಾಗೂ ಅವಶ್ಯಕತೆ ಇದ್ದಲ್ಲಿ ಪರಿಷ್ಕೃತ ಅಂದಾಜು ತಯಾರಿಸಿ ಟಿ.ಎ.ಸಿ. ಅನುಮೋದನೆ ಪಡೆದು ಸಂಬಂಧಿಸಿದ ಸಕ್ಷಮ ಅಧಿಕಾರಿಗಳಿಗೆ ಅನುಮೋದನೆಗಾಗಿ ಸಲ್ಲಿಸುವುದು.
8) ಕಾಮಗಾರಿಗೆ ಅಗತ್ಯವಿರುವ ಜಮೀನಿನ ಸ್ವಾಧೀನಕ್ಕಾಗಿ ನಿಯಮಾನುಸಾರ ತಕ್ಷಣ ಭೂಸ್ವಾಧೀನ ಪ್ರಕ್ರಿಯೆ ಪ್ರಾರಂಭಿಸಲು ಕ್ರಮ ಕೈಗೊಳ್ಳತಕ್ಕದ್ದು.
9) ಇ.ಐ.ಆರ್.ಎಲ್/ವರ್ಕ್‌ಸ್ಲಿಪ್‌ಗಳನ್ನು ಸಲ್ಲಿಸಬೇಕಾದಲ್ಲಿ ತಕ್ಷಣವೇ ಸಲ್ಲಿಸತಕ್ಕದ್ದು.
10) ತಾಂತ್ರಿಕ ಮಂಜೂರಾತಿಯನ್ನು ನೀಡುವ ಮೊದಲು ಅಂದಾಜನ್ನು ಮತ್ತೊಮ್ಮೆ ವಿವರವಾಗಿ ಪರಿಶೀಲಿಸುವುದು.
11) ನೇರ ಅಚ್ಚುಕಟ್ಟು ಹೊಂದಿರುವ ಯೋಜನೆಗಳಿಗೆ ನೀರು ಬಳಕೆದಾರರ ಸಂಘವನ್ನು ಸೃಜಿಸಬೇಕು ಹಾಗೂ ನಿರ್ವಹಣೆಯನ್ನು ಸದರಿ ಸಂಘಕ್ಕೆ ವಹಿಸತಕ್ಕದ್ದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ: 16/05/2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಲಾದ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

## ಅನುಬಂಧ

## ಸರ್ಕಾರದ ಆದೇಶ ಸಂಖ್ಯೆ ಸನೀಇ 15 ಮಸಾವಿ 2009 (3) ದಿನಾಂಕ 26.02.2009

(ಮೊತ್ತ ಲಕ್ಷ ರೂ.ಗಳಲ್ಲಿ) ಹಾಗೂ (ವಿಸ್ತೀರ್ಣ ಹೆಕ್ಟೇರ್‌ಗಳಲ್ಲಿ)

| ಕ್ರಮ ಸಂಖ್ಯೆ | ಕಾಮಗಾರಿ ಹೆಸರು | ಸ್ವಾಧೀನಪಡಿಸಬೇಕಾದ ಭೂಮಿ | ಅನುಬಂಧ–ಇ ವಿವರಗಳು | | ನದಿ ಕೊಳ್ಳ | ಕಾಮಗಾರಿ ಸ್ವರೂಪ | ಒಟ್ಟು ಅಚ್ಚುಕಟ್ಟು | ಮರು ಸ್ಥಾಪಿಸಲಾದ/ ಸೃಜಿಸಲಾದ ಅಚ್ಚುಕಟ್ಟು | ಕಾಮಗಾರಿಯ ಸಂಕ್ಷಿಪ್ತ ವಿವರಗಳು |
|---|---|---|---|---|---|---|---|---|---|
| | | | ಅಂದಾಜು ಮೊತ್ತ | ಅನುದಾನ | | | | | |
| 1 | 2 | 3 | 4 | 5 | 6 | 7 | 9 | 10 | 11 |
| | ಲೆಕ್ಕ ಶೀರ್ಷಿಕೆ 4702–00–101–1–07–139 ಕೆರೆಗಳ ಆಧುನೀಕರಣ (ಪ್ರಧಾನ ಕಾಮಗಾರಿಗಳು) | | | | | | | | |
| 1 | ಗದಗ ಜಿಲ್ಲೆ ಗದಗ ತಾಲ್ಲೂಕು ಲಕ್ಕುಂಡಿ ಗ್ರಾಮದ ದೊಣ್ಣೆಕೆರೆಯ 35ಎಕರೆ ಭೂಪ್ರದೇಶವನ್ನು ಭೂಸ್ವಾಧೀನ ಕಾಯ್ದೆಯಡಿ ವಶಪಡಿಸಿಕೊಂಡು ನೀರಾವರಿ ಸೌಲಭ್ಯದ ಸಲುವಾಗಿ ಕೆರೆಯ ಹೂಳೆತ್ತುವ ಕಾಮಗಾರಿಯನ್ನು ಕೈಗೊಳ್ಳುವುದು. | 200.00 | 200.00 | 60.00 | ಕೃಷ್ಣಾ | ಪುನರುಜ್ಜೀವನ ಕಾಮಗಾರಿ | | ಪರೋಕ್ಷ ನೀರಾವರಿ | ಹಿಂದೆ ಅಸ್ಥಿತ್ವದಲ್ಲಿದ್ದ ಹಳೆಯ ಕೆರೆಯ ಜಾಗದಲ್ಲಿ ಹೊಸ ಇಂಗು ಕೆರೆಯ ನಿರ್ಮಾಣ |
| | ಲೆಕ್ಕ ಶೀರ್ಷಿಕೆ 4702–00–101–1–07–139 ಒಟ್ಟು | 200.00 | 200.00 | 60.00 | | | | | |
| | ಲೆಕ್ಕ ಶೀರ್ಷಿಕೆ 4702–00–101–3–01–422 ಏತ ನೀರಾವರಿ ಯೋಜನೆ–ವಿಶೇಷ ಘಟಕ ಯೋಜನೆ | | | | | | | | |

| 1 | 2 | 3 | 4 | 5 | 6 | 7 | 9 | 10 | 11 |
|---|---|---|---|---|---|---|---|---|---|
| 2 | ಬೆಳಗಾವಿ ಜಿಲ್ಲೆ ರಾಯಭಾಗ ತಾಲ್ಲೂಕಿನ ಬೆಂಡವಾಡ ಗ್ರಾಮದ ಹತ್ತಿರ ಏತ ನೀರಾವರಿ ಯೋಜನೆ ನಿರ್ಮಾಣ | 295.00 | 295.00 | 88.50 | ಕೃಷ್ಣಾ | ಹೊಸ ಕಾಮಗಾರಿ | 133 | 0 | ತಲಾ 100 ಹೆಚ್.ಪಿ. ಸಾಮರ್ಥ್ಯದ 3 DWT ಪಂಪುಗಳನ್ನು ಬಳಸಿ (2 ಕಾರ್ಯ ನಿರತ ಹಾಗೂ 1 ಸ್ಟಾಂಡ್ ಬೈ) 7600 ಮೀ ಉದ್ದದ ಹಾಗೂ 450ಮೀ.ಮೀ. ವ್ಯಾಸದ ಪಿ.ಎಸ್.ಸಿ. ಏರುಕೊಳವೆ ಮೂಲಕ ಜಗನೂರು ನಾಲೆಯಿಂದ ನೀರೆತ್ತುವ ಹೊಸ ಏತನೀರಾವರಿ ಯೋಜನೆ ನಿರ್ಮಾಣಕ್ಕೆ ಪ್ರಸ್ತಾಪಿಸಿದೆ. |
| | ಲೆಕ್ಕ ಶೀರ್ಷಿಕೆ 4702-00-101-3-01-422 ಒಟ್ಟು ವಿಶೇಷ ಘಟಕ ಯೋಜನೆ | 295.00 | 295.00 | 88.50 | | | | | |
| | ಒಟ್ಟಾರೆ | 495.00 | 495.00 | 148.50 | | | | | |

ಪಿ.ಆರ್.767

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ವಿಷಯ:** 2008-09ನೇ ಸಾಲಿನ ಸವಿವರ ಅಂದಾಜಿನಲ್ಲಿ ಲೆಕ್ಕ ಶೀರ್ಷಿಕೆ 4702 ಅಡಿ ಅನುಮೋದನೆಯಾಗಿರುವ ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರ ವ್ಯಾಪ್ತಿಯಲ್ಲಿ ಬರುವ ಕಾಮಗಾರಿಗಳ ಅಂದಾಜುಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:**
1) ದಿನಾಂಕ: 19.02.2009ರ ಬಿಜಾಪುರ, ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್‌ರವರ ಪತ್ರ ಸಂಖ್ಯೆ: ಮುಇ/ಸನೀ(ಉ)ವ/ಬಿಜೆಪಿ/ ಎಇ-3/2008-09/1135.
2) ದಿನಾಂಕ: 18.02.2009ರ ಬಿಜಾಪುರ, ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್‌ರವರ ಪತ್ರ ಸಂಖ್ಯೆ: ಮುಇ/ಸನೀ(ಉ)ವ/ಬಿಜೆಪಿ/ಪಿಬಿ-2/2008-09/1057.
3) ದಿನಾಂಕ: 21.02.2009ರ ಬಿಜಾಪುರ, ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್‌ರವರ ಪತ್ರ ಸಂಖ್ಯೆ: ಮುಇಂ/ಸನೀ(ಉ)ವ/ಬಿಜೆಪಿ/ಎಇ-3/2008-09/1218.
4) ದಿನಾಂಕ: 17.02.2009ರ ಬಿಜಾಪುರ, ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್‌ರವರ ಪತ್ರ ಸಂಖ್ಯೆ: ಮುಇಂ/ಸನೀ(ಉ)ವಲಯ/ಬಿಜೆಪಿ/ಎಇ-6/2008-09/968.

**ಪ್ರಸ್ತಾವನೆ:**

2008-09ನೇ ಸಾಲಿನ ಆಯವ್ಯಯದ "ಅಪೆಂಡಿಕ್ಸ್-ಇ" ನ ಲೆಕ್ಕ ಶೀರ್ಷಿಕೆ 4702-00-101-1-07-139 ಕೆರೆಗಳ ಆಧುನೀಕರಣ (ಪ್ರಧಾನ ಕಾಮಗಾರಿಗಳು), ಲೆಕ್ಕ ಶೀರ್ಷಿಕೆ 4702-00-101-3-01-139 ಏತ ನೀರಾವರಿ ಯೋಜನೆ-ಪ್ರಧಾನ ಕಾಮಗಾರಿಗಳು ಹಾಗೂ ಲೆಕ್ಕ ಶೀರ್ಷಿಕೆ 4702-00-101-1-02-139 ಹೊಸ ಕೆರೆಗಳ ನಿರ್ಮಾಣ (ಪ್ರಧಾನ ಕಾಮಗಾರಿಗಳು) ಅಡಿ ಅಂದಾಜಿನ ಶೇ.30ರಷ್ಟು ಅನುದಾನದೊಂದಿಗೆ ಸೇರಿರುವ 5 ಕಾಮಗಾರಿಗಳ (ಕಾಮಗಾರಿಗಳ ವಿವರಗಳನ್ನು ಅನುಬಂಧದಲ್ಲಿ ತಿಳಿಸಲಾಗಿದೆ) ಅಂದಾಜು ಪಟ್ಟಿಗಳಿಗೆ (ಅಂದಾಜು ಮೊತ್ತ 489.99ಲಕ್ಷ ರೂ.ಗಳು) ಆಡಳಿತಾತ್ಮಕ ಅನುಮೋದನೆ ನೀಡುವಂತೆ ಮೇಲೆ ಓದಲಾದ ಪತ್ರಗಳಲ್ಲಿ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್‌ರವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಆಡಳಿತಾತ್ಮಕ ಅನುಮೋದನೆಗೆ ಕೋರಿರುವ ಕಾಮಗಾರಿಗಳ ಅಂದಾಜು ಪಟ್ಟಿಗಳನ್ನು 2008-09ನೇ ಸಾಲಿಗೆ ಮುಂದುವರೆಸಿರುವ 2007-08ನೇ ಸಾಲಿನ ಸಣ್ಣ ನೀರಾವರಿ ಬೆಳಗಾವಿ/ಗುಲಬರ್ಗಾ ವೃತ್ತದ ದರಪಟ್ಟಿಯ ದರಗಳನ್ನು ಅಳವಡಿಸಿ ತಯಾರಿಸಲಾಗಿದೆ. ಈ ಕಾಮಗಾರಿಗಳು ಆರ್ಥಿಕವಾಗಿ ಹಾಗೂ ತಾಂತ್ರಿಕವಾಗಿ ಶಕ್ಯವಾಗಿದೆ.

ಪ್ರಸ್ತಾಪಿಸಿರುವ ಕಾಮಗಾರಿಗಳ ಅಂದಾಜು ಮೊತ್ತ, ಆಯವ್ಯಯದ ಲೆಕ್ಕ ಶೀರ್ಷಿಕೆ, ಅನುದಾನ, ಕಾಮಗಾರಿಯ ಸ್ವರೂಪ ಹಾಗೂ ಅಂದಾಜಿನಲ್ಲಿ ಅಳವಡಿಸಿರುವ ಕೆಲಸಗಳ ವಿವರ, ಸೃಷ್ಟಿಯಾಗಲಿರುವ ಹೊಸ ಅಚ್ಚುಕಟ್ಟು ಹಾಗೂ ಲಾಭ ವೆಚ್ಚದ ಅನುಪಾತ ವಿವರಗಳನ್ನು ಅನುಬಂಧದಲ್ಲಿ ಕಾಮಗಾರಿವಾರು ನೀಡಲಾಗಿದೆ.

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 15 ಮಸಾವಿ 2009 (6) ಬೆಂಗಳೂರು, ದಿನಾಂಕ: 26ನೇ ಫೆಬ್ರವರಿ 2009.**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ವ್ಯಾಪ್ತಿಗೆ ಬರುವ ಅಡಕಗಳಿಸಿರುವ ಅನುಬಂಧದಲ್ಲಿ ತಿಳಿಸಿರುವ ಒಟ್ಟು ರೂ 489.99 ಲಕ್ಷ (ನಾಲ್ಕು ನೂರ ಎಂಬತ್ತೊಂಬತ್ತು ಲಕ್ಷ ತೊಂಬತ್ತೊಂಬತ್ತು ಸಾವಿರ ರೂ.) ಮೊತ್ತದ 5 ಕಾಮಗಾರಿಗಳ ಅಂದಾಜು ಪಟ್ಟಿಗಳಿಗೆ ಕೆಳಕಂಡ ಷರತ್ತಿಗೊಳಪಟ್ಟು ಸರ್ಕಾರವು ಆಡಳಿತಾತ್ಮಕ ಅನುಮೋದನೆ ನೀಡಿದೆ.

1) ಕಾಮಗಾರಿಯ ವೆಚ್ಚವು ಯಾವುದೇ ಕಾರಣಕ್ಕೂ ಅನುಮೋದಿಸಿದ ಟೆಂಡರ್ ಮೊತ್ತಕ್ಕಿಂತ ಹೆಚ್ಚಾಗಬಾರದು ಹಾಗೂ ಕಾಮಗಾರಿಯನ್ನು ಕಾಲಮಿತಿಯೊಳಗೆ ಪೂರ್ಣಗೊಳಿಸತಕ್ಕದ್ದು.
2) ಒಂದು ವೇಳೆ ಸ್ಥಳ ಪರಿಸ್ಥಿತಿಗೆ ಅನುಗುಣವಾಗಿ ಹೆಚ್ಚಳ ನಿರೀಕ್ಷಿಸಿದಲ್ಲಿ ತಕ್ಷಣವೇ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದು ಕಾಮಗಾರಿಯನ್ನು ಪೂರ್ಣಗೊಳಿಸತಕ್ಕದ್ದು.
3) ಕಾಮಗಾರಿ ಪ್ರಾರಂಭಿಸುವ ಮುನ್ನ ವಿನ್ಯಾಸ ಬದಲಾವಣೆಯಿಂದಾಗಿ ಅಥವಾ ಬೇರೆ ಕಾರಣದಿಂದ ಅನುಮೋದಿಸಿದ ಅಂದಾಜು ಮೊತ್ತ ಹೆಚ್ಚಾಗುವ ಸಂಭವ ಇದ್ದಲ್ಲಿ,
4) ತಕ್ಷಣ ಪರಿಷ್ಕೃತ ಅಂದಾಜಿಗೆ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದು ನಂತರ ಕಾಮಗಾರಿಯನ್ನು ಪ್ರಾರಂಭಿಸುವುದು.
5) ಕಾಮಗಾರಿಯ ಅಂದಾಜು ಪಟ್ಟಿಗೆ ಸಂಬಂಧಿಸಿದಂತೆ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿ/ತಾಂತ್ರಿಕ ಸಮಿತಿಯು ಸಭೆಯಲ್ಲಿ ನೀಡಿರುವ ಸೂಚನೆಗಳನ್ನು ಚಾಚೂ ತಪ್ಪದೇ ಪಾಲಿಸತಕ್ಕದ್ದು.

6) ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999ರ ಅನುಸಾರ ಟೆಂಡರ್ ಕರೆದು ತೆಗೆದುಕೊಳ್ಳತಕ್ಕದ್ದು.

7) ಕಾಮಗಾರಿ ಪೂರ್ಣಗೊಂಡ ಕೂಡಲೇ ಪಿ.ಸಿ.ಆರ್ ವರದಿಯನ್ನು ಸಲ್ಲಿಸತಕ್ಕದ್ದು ಹಾಗೂ ಅವಶ್ಯಕತೆ ಇದ್ದಲ್ಲಿ ಪರಿಷ್ಕೃತ ಅಂದಾಜು ತಯಾರಿಸಿ ಟಿ.ಎ.ಸಿ. ಅನುಮೋದನೆ ಪಡೆದು ಸಂಬಂಧಿಸಿದ ಸಕ್ಷಮ ಅಧಿಕಾರಿಗಳಿಗೆ ಅನುಮೋದನೆಗಾಗಿ ಸಲ್ಲಿಸುವುದು.

8) ಕಾಮಗಾರಿಗೆ ಅಗತ್ಯವಿರುವ ಜಮೀನಿನ ಸ್ವಾಧೀನಕ್ಕಾಗಿ ನಿಯಮಾನುಸಾರ ತಕ್ಷಣ ಭೂಸ್ವಾಧೀನ ಪ್ರಕ್ರಿಯೆ ಪ್ರಾರಂಭಿಸಲು ಕ್ರಮ ಕೈಗೊಳ್ಳತಕ್ಕದ್ದು.

9) ಇ.ಐ.ಆರ್.ಎಲ್/ವರ್ಕ್‌ಸ್ಲಿಪ್‌ಗಳನ್ನು ಸಲ್ಲಿಸಬೇಕಾದಲ್ಲಿ ತಕ್ಷಣವೇ ಸಲ್ಲಿಸತಕ್ಕದ್ದು.

10) ತಾಂತ್ರಿಕ ಮಂಜೂರಾತಿಯನ್ನು ನೀಡುವ ಮೊದಲು ಅಂದಾಜನ್ನು ಮತ್ತೊಮ್ಮೆ ವಿವರವಾಗಿ ಪರಿಶೀಲಿಸುವುದು.

11) ನೀರ ಅಚ್ಚುಕಟ್ಟು ಹೊಂದಿರುವ ಯೋಜನೆಗಳಿಗೆ ನೀರು ಬಳಕೆದಾರರ ಸಂಘವನ್ನು ಸೃಜಿಸಬೇಕು ಹಾಗೂ ನಿರ್ವಹಣೆಯನ್ನು ಸದರಿ ಸಂಘಕ್ಕೆ ವಹಿಸತಕ್ಕದ್ದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ: 16/05/2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಲಾದ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ).

## ಅನುಬಂಧ

**ಸರ್ಕಾರದ ಆದೇಶ ಸಂಖ್ಯೆ ಸನೀಇ 15 ಮಸಾವಿ 2009 (6) ದಿನಾಂಕ 26.02.2009**

**(ಮೊತ್ತ ಲಕ್ಷ ರೂ.ಗಳಲ್ಲಿ) ಹಾಗೂ (ವಿಸ್ಥೀರ್ಣ ಹೆಕ್ಟೇರ್‌ಗಳಲ್ಲಿ)**

| ಕ್ರಮ ಸಂಖ್ಯೆ | ಕಾಮಗಾರಿ ಹೆಸರು | ಸ್ವೀಕೃತವಾದ ಅಂದಾಜು ಮೊತ್ತ | ಅನುಬಂಧ–ಇ ವಿವರಗಳು | | ನದಿ ಕೊಳ್ಳ | ಕಾಮಗಾರಿ ಸ್ವರೂಪ | ಹೊಸ ಅಚ್ಚುಕಟ್ಟು | ಪುನರ್ ಸ್ಥಾಪನಾಗುವ/ ಸ್ಥಿರೀಕರಿಸುವ ಅಚ್ಚುಕಟ್ಟು | ಕಾಮಗಾರಿಯ ಸಂಕ್ಷಿಪ್ತ ವಿವರಗಳು |
|---|---|---|---|---|---|---|---|---|---|
| | | | ಅಂದಾಜು ಮೊತ್ತ | ಅನುದಾನ | | | | | |
| 1 | 2 | 3 | 4 | 5 | 6 | 7 | 9 | 10 | 11 |
| | **ಲೆಕ್ಕ ಶೀರ್ಷಿಕೆ 4702–00–101–1–07–139 ಕೆರೆಗಳ ಆಧುನೀಕರಣ (ಪ್ರಧಾನ ಕಾಮಗಾರಿಗಳು)** | | | | | | | | |
| 1 | ಧಾರವಾಡ ಜಿಲ್ಲೆ ಧಾರವಾಡ ತಾಲ್ಲೂಕು ಹಿರೇಕೆರೆ ಅಭಿವೃದ್ಧಿ ಕಾಮಗಾರಿ | 99.99 | 100.00 | 30.00 | ಕೃಷ್ಣಾ | ಪುನರುಜ್ಜೀವನ ಕಾಮಗಾರಿ | | 46 | ಕೆರೆಯ ಏರಿ, ಕೋಡಿ, ನಾಲೆ ದುರಸ್ತಿ ಇತ್ಯಾದಿ. |
| | **ಲೆಕ್ಕ ಶೀರ್ಷಿಕೆ 4702–00–101–1–02–139 ಒಟ್ಟು** | **99.99** | **100.00** | **30.00** | | | | | |

